# ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿ

Shilpa Siddhanthi Sri Siddhalingswamy



• ರಾಮದಾಸ ಅಡ್ಯಂತಾಯ



ಕರ್ನಾಟಕ ಲಲಿತಕಲಾ ಅಕಾಡೆಮಿ
Karnataka Lalithakala Academy

# ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿ

# Shilpa Siddhanthi Sri Siddhalingswamy

ರಾಮದಾಸ ಅಡ್ಯಂತಾಯ




ಕರ್ನಾಟಕ ಲಲಿತಕಲಾ ಅಕಾಡೆಮಿ

ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು -560 002
(ದೂರವಾಣಿ ಸಂಖ್ಯೆ: 080-22480297)

**Shilpa Siddhanthi Sri Siddhalingswamy:** A biography by Ramadasa Adanthya
Published by V.N. Mallikarjuna Swamy, Registrar, Karnataka Lalithakala Academy, Kannada Bhavana, J.C.Road, Bengaluru-560 002
Ph: 080-22480297

| | | |
|---|---|---|
| Thied Edition | : | 2007 |
| Pages | : | viii + 80 + 20 |
| Copies | : | 1000 |
| Price | : | Rs. 120/- |
| ಹಕ್ಕುಗಳು | : | ಕಾಯ್ದಿರಿಸಿದೆ |
| ಮುದ್ರಣ | : | ೨೦೦೭ |
| ಪುಟಗಳು | : | ೮ +೮೦ + ೨೦ |
| ಪ್ರತಿಗಳು | : | ೧೦೦೦ |
| ಬೆಲೆ | : | ರೂ. ೧೨೦/- |
| ಆಂಗ್ಲ ಅನುವಾದ | : | ಸಿ. ಎಸ್. ಶಶಿಧರ್ |
| Translated by | : | C. S. Shashidhar |

**ಪ್ರಕಾಶಕರು :**
**ವಿ.ಎನ್. ಮಲ್ಲಿಕಾರ್ಜುನಸ್ವಾಮಿ**
ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು-೫೬೦ ೦೦೨

**ಮುದ್ರಕರು :**
**ರಶ್ಮಿ ಪ್ರಿಂಟರ್ಸ್**
ನಂ. 12ಬಿ, ಮೊದಲನೇ ಕ್ರಾಸ್
ಕಲಾಸಿಪಾಳ್ಯ ಹೊಸ ಬಡಾವಣೆ
ಬೆಂಗಳೂರು-560 002
9901916581

# ಅಧ್ಯಕ್ಷರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯು ಕಳೆದ ನಲವತ್ತಮೂರು ವರ್ಷಗಳಿಂದ ಲಲಿತ ಕಲೆಗೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಪ್ರಕಟಿಸುತ್ತಾ ಬಂದಿದೆ. ಈ ಎಲ್ಲ ಗ್ರಂಥಗಳೂ ಕರ್ನಾಟಕದ ಕಲಾಸಕ್ತರ ಹಾಗೂ ಕಲಾವಿದರ ಮೆಚ್ಚುಗೆ ಗಳಿಸಿರುತ್ತವೆ. ಈ ಕಲಾ ಸಾಹಿತ್ಯ ಪ್ರಕಟಣೆಯ ಜೊತೆಗೆ ಕರ್ನಾಟಕದ ಚಿತ್ರ ಕಲಾಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ ಅನೇಕ ಹಿರಿಯ ಕಲಾವಿದರ ಸಾಧನೆಗಳೊಂದಿಗೆ ಅವರ ಸಮಗ್ರ ಪರಿಚಯವನ್ನು ನೀಡುವ ಕಲಾವಿದರ ಮಾಲೆ ಪುಸ್ತಕಗಳನ್ನೂ ಅಕಾಡೆಮಿಯು ಪ್ರಕಟಿಸುತ್ತ ಬಂದಿದೆ. ಈ ಕಲಾವಿದರ ಮಾಲೆಯು ಆಯಾ ಕಲಾವಿದರ ಕಾಲಘಟ್ಟದಲ್ಲಿ ಬೆಳೆದು ಬಂದ ಕರ್ನಾಟಕದ ಕಲಾ ಇತಿಹಾಸವನ್ನೂ ಪರಿಚಯಿಸುತ್ತದೆ. ಕಲಾವಿದರ ಪರಿಚಯದ ಪುಸ್ತಕವನ್ನು ಕನ್ನಡ ಭಾಷೆಯಲ್ಲಿ ಅಲ್ಲದೇ ಇಂಗ್ಲಿಷ್ ಭಾಷೆಗೂ ಅನುವಾದಿಸಿ ಪ್ರಕಟಿಸಲಾಗುತ್ತದೆ. ಈ ಮೂಲಕ ನಮ್ಮ ಕಲಾವಿದರನ್ನೂ ಅವರ ಸಾಧನೆಯನ್ನೂ ಹೊರ ರಾಜ್ಯದ ಓದುಗರಿಗೆ ಪರಿಚಯಿಸಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಕಟಿತ 'ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿ' ಪುಸ್ತಕವು ಅವರ ಜೀವನ ಮತ್ತು ಸಾಧನೆಗಳನ್ನು ಪರಿಚಯಿಸುತ್ತದೆ. ಈ ಪುಸ್ತಕದ ಲೇಖಕರೂ ಸ್ವತಃ ಕಲಾವಿದರಾಗಿದ್ದು ಪ್ರಸ್ತುತ ಕಲಾವಿದರ ಜೀವನ, ಸಾಧನೆಗಳನ್ನು ಅರಿತವರಾಗಿದ್ದುದರಿಂದ ಈ ಕಲಾವಿದರ ಸಮಗ್ರ ಪರಿಚಯದ ಈ ಪುಸ್ತಕವು ಓದುಗರ ಗಮನಕ್ಕೆ ಬರುತ್ತದೆ ಎಂದು ಭಾವಿಸಲಾಗಿದೆ.

ಈ ಮೊದಲು ಕಿರು ಅಳತೆಯಲ್ಲಿ ಪ್ರಕಟವಾಗುತ್ತಿದ್ದ ಕಲಾವಿದರ ಪರಿಚಯದ ಪುಸ್ತಕಗಳನ್ನು ಈಗ ದೊಡ್ಡ ಅಳತೆಯಲ್ಲಿ ಸಿದ್ಧಪಡಿಸಿ ಓದುಗರ ಕೈಗಿತ್ತಿದ್ದೇವೆ.

ಎಂದಿನಂತೆ ಕಲಾಸ್ತಕರು, ಕಲಾವಿದರು, ಕಲಾ ಇತಿಹಾಸ ಪ್ರೇಮಿಗಳು ಈ ಪುಸ್ತಕಗಳನ್ನು ಸ್ವಾಗತಿಸುತ್ತಾರೆಂದು ಆಶಿಸಲಾಗಿದೆ.

ಈ ಪುಸ್ತಕವನ್ನು ಮುದ್ರಿಸಿದ **ರಶ್ಮಿ ಪ್ರಿಂಟರ್ಸ್** ಅವರಿಗೂ ಪ್ರಕಟಿಸಿದ ಕರ್ನಾಟಕ ಲಲಿತಕಲಾ ಅಕಾಡೆಮಿಯ ರಿಜಿಸ್ಟ್ರಾರ್ ಶ್ರೀ ವಿ.ಎನ್. ಮಲ್ಲಿಕಾರ್ಜುನಸ್ವಾಮಿ ಅವರಿಗೂ ಅಕಾಡೆಮಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಬೆಂಗಳೂರು **ವಿ.ಟಿ. ಕಾಳೆ**

# ಲೇಖಕರ ಮಾತು

ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳ ಬಗ್ಗೆ ಬರೆದ ಈ ಲೇಖನ, ಅವರ ಒಂದು ಪರಿಚಯಾತ್ಮಕ ಲೇಖನ ಮಾತ್ರ. ನನಗೆ ದೊರೆತ ಸೀಮಿತ ಅವಧಿಯಲ್ಲಿ, ನನ್ನ ಇತಿಮಿತಿಯಲ್ಲಿ ಈ ಲೇಖವನ್ನು ಸಿದ್ಧಪಡಿಸಿರುತ್ತೇನೆ. ಇವರ ಬಗ್ಗೆ ಹಲವು ಲೇಖನಗಳು ಬಂದಿದ್ದರೂ ಇವರ ಕಲೆ ಮತ್ತು ಬದುಕಿನ ಬಗೆಗಿನ ಒಂದು ಸಮಗ್ರವಾದ ಅಧ್ಯಯನ ನಡೆಯುವ ಅವಶ್ಯಕತೆ ಇದೆ. ಸ್ವಾಮಿಯವರ ವಂಶಜರನ್ನು, ಸ್ವಾಮಿಯವರ ಶಿಷ್ಯಂದಿರ ವಂಶಜರನ್ನು, ಮೈಸೂರಿನ ಹಿರಿಯ ಕಲಾವಿದರನ್ನು, ಹಿರಿಯ ನಾಗರಿಕರನ್ನು ಸಂದರ್ಶನ ಮಾಡಿ ವಿಷಯ ಸಂಗ್ರಹಿಸಿ, ಕೆಲವು ಮುದ್ರಿತ ಲೇಖನಗಳನ್ನು ಮತ್ತು ಮೈಸೂರು ಮತ್ತು ಸುತ್ತಮುತ್ತ ದೊರೆತ ಮೂಲ ಕೃತಿಗಳನ್ನು ಪರಿವೀಕ್ಷಿಸಿ ಈ ಲೇಖನವನ್ನು ಸಿದ್ಧಪಡಿಸಿರುತ್ತೇನೆ. ಈ ಲೇಖನವನ್ನು ಬರೆಯಲು ನನಗೆ ಅನುವು ಮಾಡಿಕೊಟ್ಟ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರು, ರಿಜಿಸ್ಟ್ರಾರ್ ಮತ್ತು ಎಲ್ಲಾ ಸದಸ್ಯರುಗಳಿಗೆ ಧನ್ಯವಾದಗಳು.

ಈ ಲೇಖನ ಸಿದ್ಧಪಡಿಸುವಲ್ಲಿ ನನ್ನ ಕೆಲಸವು ಅರ್ಧದಷ್ಟು ಸುಲಭ ಸಾಧ್ಯವಾಗುವಂತೆ ತಮ್ಮ ಹಲವು ಲೇಖನಗಳ ಮುಖಾಂತರ ಪರೋಕ್ಷವಾಗಿ ನನಗೆ ಸಹಾಯ ಮಾಡಿದ ಎಲ್.ಶಿವಲಿಂಗಪ್ಪನವರಿಗೆ ತುಂಬಾ ಋಣಿಯಾಗಿದ್ದೇನೆ, ಹಾಗೇನೇ ಈ ಲೇಖನ ಸಿದ್ಧಪಡಿಸುವ ಸಂದರ್ಭದಲ್ಲಿ ತಿದ್ದಿ ತೀಡಿ, ನೆರವಾದ ಡಾ. ಎಚ್. ಕುಲಕರ್ಣಿ ಮತ್ತು ಪರೋಕ್ಷವಾಗಿ ಸಲಹೆ ಸೂಚನೆಗಳನ್ನಿತ್ತು ಪ್ರೋತ್ಸಾಹಿಸಿದ ಡಾ. ಡಿ.ಎ.ಉಪಾಧ್ಯ, ಡಾ ಎ.ಎಲ್. ನರಸಿಂಹನ್, ಹಿರಿಯ ಕಲಾವಿದರುಗಳಾದ ರಾಮನರಸಯ್ಯ, ಕುಪ್ಪಾಚಾರ್, ಸಿದ್ಧಲಿಂಗಸ್ವಾಮಿಯವರ ವಂಶಸ್ಥರು ಮತ್ತು ಸ್ವಾಮಿಯವರ ಶಿಷ್ಯಂದಿರ ವಂಶಸ್ಥರಾದ ಎನ್. ಶಿವಾನಂದ, ಬಿ.ಎಸ್.ಯೋಗಿರಾಜ್, ಎನ್ ಶಿವಶಂಕರ್, ಮೈಸೂರು ಅರಮನೆಯ, ಅರಮನೆ ದೇವಾಲಯಗಳ ಮುಜರಾಯಿಯ ಆಡಳಿತ ವರ್ಗ, ಜಯಚಾಮರಾಜೇಂದ್ರ ಕಲಾ ಗ್ಯಾಲರಿಯ ಆಡಳಿತ ವರ್ಗ, ಪ್ರಾಚ್ಯವಸ್ತು ಸಂಗ್ರಹಾಲಯ, ಅರ್ಕೀವ್ರಸ್, ಪ್ರಾಚ್ಯಶಾಸ್ತ್ರಸಂಶೋಧನಾಲಯದ ಆಡಳಿತ ವರ್ಗ, ಕಾಮಕಾಮೇಶ್ವರಿ ದೇವಸ್ಥಾನ, ಭುವನೇಶ್ವರಿ ದೇವಸ್ಥಾನ, ಕಮಟೇಶ್ವರ ದೇವಸ್ಥಾನ ಪರಕಲ ಮಠದ ಅರ್ಚಕರು ಕೊನೆಯದಾಗಿ ಆದರೆ ಅತಿಮುಖ್ಯವಾಗಿ ನನಗೆ ಎಲ್ಲಾ ರೀತಿಯಿಂದ ಸಹಕರಿಸಿದ ನನ್ನ ಮಡದಿ ಸಬಿತ ರಾಮದಾಸ ಇವರೆಲ್ಲರಿಗೂ ಹೃತ್ಪೂರ್ವಕ ಧನ್ಯವಾದಗಳು.

**ರಾಮದಾಸ ಅಡ್ಯಂತಾಯ**



ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿ

# ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿ

ಶಿಲ್ಪ ಮತ್ತು ಚಿತ್ರ ಎನ್ನುವ ಪದಗಳಿಗೆ ಪ್ರಾಚೀನ ಗ್ರಂಥಗಳಲ್ಲೆಲ್ಲಾ ವಿಶಾಲವಾದ ಅರ್ಥಗಳನ್ನು ನೀಡಲಾಗಿದೆ. ಮನಸ್ಸಿನ ಏಕಾಗ್ರತೆಯಿಂದ ರಚಿಸಿದ ಒಂದು ರಚನೆಯು ಶಿಲ್ಪ ಎಂದು ಹೇಳಲಾಗಿದೆ.

ನಾನಾವಿಧಾನಂ ವಸ್ತೂಣಾಂ ಯಂತ್ರಾಣಾಂ ಶಿಲ್ಪ ಸಂಪದಾಂ ।
ಧಾತೂನಾಂ ಸಾಧನಾನಂ ಚ ವಾಸ್ತುನಾಂ ಶಿಲ್ಪ ಸಂಜ್ಞಿತಂ।

ಹಲವು ಬಗೆಯ ವಸ್ತುಗಳು, ಯಂತ್ರಗಳು, ಕಲ್ಲು, ಲೋಹ, ಮಣ್ಣು ಮೊದಲಾದ ದ್ರವ್ಯಗಳನ್ನು ಬಳಸಿದ ಉಪಕರಣಗಳು, ಕಟ್ಟಡಗಳು ಇವುಗಳೆಲ್ಲಕ್ಕೂ ಶಿಲ್ಪವೆಂದು ಭೃಗು ಸಂಹಿತೆ ಹೇಳಿದರೆ, ವಾಸ್ತುವಿನಿಂದ (ಕಟ್ಟಡ ರಚನೆ) ಬೇರ್ಪಟ್ಟ ಶಿಲ್ಪ ಪ್ರಕಾರಗಳಿಗೆ ಚಿತ್ರವೆಂಬ ಪದವನ್ನು ಬಳಸಿರುವುದನ್ನು ಶಾಸ್ತ್ರ ಗ್ರಂಥಗಳಲ್ಲಿ ಕಾಣಬಹುದು. ಹಾಗೇನೇ ಚಿತ್ರ, ಚಿತ್ರಾರ್ಧ, ಚಿತ್ರಾಭಾಸ ಎಂಬ ವಿಭಾಗಗಳನ್ನು ಮಾಡಿರುವುದನ್ನು ಮಾನಸಾರದಲ್ಲಿ ಕಾಣಬಹುದು. ನಾವು ಈಗ ದುಂಡಾಕೃತಿಯ ಶಿಲ್ಪವೆಂದು ಗುರುತಿಸುವ ಶಿಲ್ಪವನ್ನು, ಚಿತ್ರ = ಸರ್ವಾಂಗಂ ದೃಶ್ಯಮಾನಂ, ಈಗ ಉಬ್ಬು ಶಿಲ್ಪವೆಂದು ಗುರುತಿಸುವ ಶಿಲ್ಪವನ್ನು (ರಿಲೀಫ್) ಚಿತ್ರಾರ್ಧ = ಅರ್ಧಂ ಅರ್ಧಾಂಗ ದರ್ಶನಂ, ಸಮಪಾತಾಳಿಯಲ್ಲಿ ರಚಿಸಿದ ಕೃತಿ (ಚಿತ್ರ)ವನ್ನು ಚಿತ್ರಾಭಾಸ = ಅರ್ಧಾರ್ಧಂ ದೃಶ್ಯಮಾನಂ ಅಭಾಸತಿ ತಥ್ಯತೆ ಎಂದು ಮಾನಸಾರದಲ್ಲಿ ದೃಶ್ಯಕಲೆಯ ವಿವಿಧ ಪ್ರಕಾರಗಳನ್ನು ವಿಶ್ಲೇಷಿಸಿರುವುದನ್ನು ಕಾಣಬಹುದು.

ಈ ಶಿಲ್ಪಕಲಾಕೃತಿಗಳನ್ನು ರಚಿಸುವ ಕಲಾಕಾರರ ಬಗ್ಗೆಯೂ ಶಾಸ್ತ್ರಗ್ರಂಥಗಳಲ್ಲಿ ಸಾಕಷ್ಟು ವಿವರವಾಗಿ ತಿಳಿಸಲಾಗಿದೆ. ನಾರಾಯಣನೆಂಬ ಋಷಿಯ ತಪೋಭಂಗ ಮಾಡಲು ಅಪ್ಸರೆಯರು ಬಂದಾಗ ಮಾವಿನ ಎಲೆಯ ರಸದಿಂದ ತನ್ನ ತೊಡೆಯ ಮೇಲೆ ಸುಂದರವಾದ ಸ್ತ್ರೀಯ ಚಿತ್ರ ರಚಿಸಿ ಅದಕ್ಕೆ ಜೀವ ತುಂಬಿ ಅವಳಿಗೆ ಊರ್ವಶಿ( ಊರು=ತೊಡೆ) ಎಂದು ನಾಮಕರಣ ಮಾಡಿ ಅಪ್ಸರೆಯರು ನಾಚುವಂತೆ ಮಾಡಿ, ಈ ವಿದ್ಯೆಯನ್ನು ವಿಶ್ವಕರ್ಮನಿಗೆ ಬೋಧಿಸಿದನೆಂಬ ಕಥೆಯಿದ್ದರೆ, ಚಿತ್ರಸೂತ್ರವೊಂದರ ಪ್ರಕಾರ ವಿಷ್ಣು ಮಾವಿನಹಣ್ಣಿನ ರಸದಿಂದ ತನ್ನ ತೊಡೆಯ ಮೇಲೆ ಸುಂದರವಾದ ಅಪ್ಸರೆಯ ಚಿತ್ರ ಬರೆದು ಅದಕ್ಕೆ ಜೀವತುಂಬಿ ಊರ್ವಶಿಯೆಂದು

ಕರೆದ ಎಂಬ ಪ್ರಸ್ತಾಪವಿದೆ. ವಿಶ್ವಕರ್ಮನು ಶಿಲ್ಪಿಗಳಿಗೆ ಆಚಾರ್ಯನಾಗಿದ್ದು, ಶಿಲ್ಪ, ಚಿತ್ರ, ವಾಸ್ತು ಮುಂತಾದ ದೃಶ್ಯಕಲಾಪ್ರಕಾರಗಳು ಆತನಿಂದಲೇ ಪ್ರಚುರವಾದುವೆಂದು ತಿಳಿಯಬಹುದು.

ಶಿಲ್ಪ ಶಾಸ್ತ್ರದಲ್ಲಿ ಸ್ತಪತಿ, ಸೂತ್ರಗಾಹಿ, ವರ್ಧಕಿ ಮತ್ತು ತಕ್ಷಕರಿದ್ದು ತಕ್ಷಕನನ್ನು ಹೊರತುಪಡಿಸಿ ಉಳಿದ ಮೂವರಿಗೂ ಚಿತ್ರಕಲೆಯು ಜ್ಞಾನವಿರಬೇಕಲ್ಲದೆ, ಸ್ತಪತಿಯಂತೂ ಸರ್ವಶಾಸ್ತ್ರಜ್ಞನಾಗಿರಬೇಕು ಎಂದು ಮಾನಸಾರದಲ್ಲಿ ಉಲ್ಲೇಖಿಸಲಾಗಿದೆ ( ಸೂತ್ರಗ್ರಾಹಿಯೆಂದರೆ ಅಳತೆ ಮಾನದಲ್ಲಿ ಪರಿಣಿತಿ, ವರ್ಧಕಿಯೆಂದರೆ ಚಿತ್ರಕಲಾವಿದ, ತಕ್ಷಕನೆಂದರೆ ಮರ, ಶಿಲೆ, ಲೋಹ ಮುಂತಾದ ಮಾಧ್ಯಮಗಳ ಪರಿಣಿತ) ಹಾಗೇನೇ ಚಿತ್ರಕಲಾವಿದ ಒಳ್ಳೆಯ ಮನುಷ್ಯನಾಗಿರಬೇಕು, ಸೋಮಾರಿಯಾಗಿರಬಾರದು, ಕೋಪಗೊಳ್ಳಬಾರದು, ಶುದ್ಧಜೀವನ ನಡೆಸುವ, ಅಧ್ಯಯನಶೀಲನಾದ, ಆತ್ಮಸಂಯಮದ, ಭಕ್ತಿಮನೋಭಾವದ, ಉದಾರ ಹೃದಯದ, ದ್ವೇಷಾಸೂಯರಹಿತನಾದ ವ್ಯಕ್ತಿಯಾಗಿರಬೇಕು ಎಂದು ಶ್ರೀ ಮಹಾ ವಜ್ರಭೈರವ ತಂತ್ರದಲ್ಲಿ ಹೇಳಿರುವುದನ್ನು ಇಲ್ಲಿ ಗಮನಿಸಬಹುದು. ಅಲ್ಲದೆ ಪ್ರತಿಭಾ ಅಥವಾ ಪ್ರತಿಭಾವನಾಶಕ್ತಿ, ವಿವರ ವೀಕ್ಷಣಶಕ್ತಿ, ಅಭ್ಯಾಸಸಿದ್ಧ ಹಸ್ತಕೌಶಲ, ಛಂದಸ್ಸಿನ ಅಥವಾ ಸಮತೋಲನ ಶಿಕ್ಷಣದ ಪರಿಣತಿ, ಅನೇಕ ಭಾವಾವಸ್ತೆಗಳಲ್ಲಿ ಪ್ರಾಣಿಗಳ ಮತ್ತು ಮಾನವರ ಅಂಗಾಂಗಗಳಲ್ಲಾಗುವ ಚಲನೆ, ಪ್ರತಿಕ್ರಿಯೆಗಳ ಪರಿಜ್ಞಾನ, ಪ್ರತ್ಯುತ್ಪನ್ನ ಮತಿತ್ವ, ಸ್ವಾಸ್ಥಸಂಯಮ ಮತ್ತು ಶೀಲ ಮುಂತಾದ ಅರ್ಹತೆಗಳು ಒಬ್ಬ ಕಲಾವಿದನಿಗಿರಬೇಕೆಂದು ನಮ್ಮ ಶಾಸ್ತ್ರ ಗ್ರಂಥಗಳು ಸವಿಸ್ತಾರವಾಗಿ ಹೇಳಿವೆ.

ಹದಿನಾರನೇ ಶತಮಾನದ ದ್ವಿತೀಯಾರ್ಧದಲ್ಲಿ ವಿಜಯನಗರ ರಾಜಮನೆತನವು ಪತನವಾದ ಮೇಲೆ ಚಿತ್ರಕಾರರು, ಶಿಲ್ಪಿಗಳು ಮುಂತಾದ ಎಲ್ಲಾ ಕಲಾಕಾರರಿಗೆ ರಾಜಾಶ್ರಯ ತಪ್ಪಿತು. ಇವರು ಜೀವನೋಪಾಯಕ್ಕಾಗಿ ದಕ್ಷಿಣ ರಾಜ್ಯಗಳ ರಾಜರುಗಳನ್ನು ಮತ್ತು ಪಾಳೇಗಾರರನ್ನು ಆಶ್ರಯಿಸಬೇಕಾಗಿತ್ತು. ಹೀಗೆ ವಲಸೆ ಬಂದ ನೂರಾರು ಕಲಾವಿದರುಗಳಿಗೆ ಮೈಸೂರು ಅರಮನೆಯ ಪೋಷಣೆ ದೊರೆಯಿತು. 17–18ನೇ ಶತಮಾನದಲ್ಲಿ ಭಾರತದ ಎಲ್ಲಾ ರಾಜ್ಯಗಳು ಅಸ್ಥಿರವಲ್ಲಿದ್ದ ಕಾಲ. ಆದರೂ ಮೈಸೂರು ಅರಸರು ಮತ್ತು ಅವರ ಅಧೀನದಲ್ಲಿದ್ದ ಅನೇಕ ಪಾಳೇಗಾರರು, ಕಲಾವಿದರಿಗೆ ನಿರಂತರವಾಗಿ ಪ್ರೋತ್ಸಾಹ ಕೊಡುತ್ತಿದ್ದರು. ಚಿತ್ರದುರ್ಗದ ಪಾಳೇಗಾರರು, ಶಿವಮೊಗ್ಗ ಜಿಲ್ಲೆಯ ನಗರ ಪಾಳೇಗಾರರು, ಮಾತ್ರವಲ್ಲದೆ ಚೆನ್ನಪಟ್ಟಣ, ಆನೆಗುಂದಿ, ಪೆನುಗೊಂಡ, ಮಧುಗಿರಿ, ಹಾಸನ ಮುಂತಾದ ಕಡೆಗಳ ಪಾಳೇಗಾರರು ಸಹ ಈ ಕಾರ್ಯದಲ್ಲಿ ಹಿಂದೆ ಬೀಳಲಿಲ್ಲ. ಹೀಗೆ ವಿಜಯನಗರದ ಅವಸಾನದ ನಂತರ ವಲಸೆ ಬಂದು ಕೊಳ್ಳೇಗಾಲದಲ್ಲಿ ನೆಲೆಸಿದ ಶಿಲ್ಪಕಲಾ ಪೀಳಿಗೆಯವರೇ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು.

ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ಗುಣವಾಚಕವಾದ ಶಿಲ್ಪಿ ಎಂಬ ಪದವನ್ನು ಈಗ ಚಾಲ್ತಿಯಲ್ಲಿರುವ ಸೀಮಿತ ಅರ್ಥದ ಶಿಲ್ಪಿಯೆಂದು ಪರಿಗಣಿಸದೆ. ಭಾರತೀಯ ಶಾಸ್ತ್ರಗಳಲ್ಲಿ ಶಿಲ್ಪಿಯೆಂಬ ಪದಕ್ಕಿರುವ ವಿಶಾಲಾರ್ಥದಲ್ಲಿ ಇವರನ್ನು ಪರಿಭಾವಿಸುವುದು ಸೂಕ್ತ. ಇವರು ವಂಶಪಾರಂಪರ್ಯವಾಗಿ ಬಂದಿರುವ ಗುಡಿಕೈಗಾರಿಕೆ, ಪಂಚಲೋಹದ ಕೆಲಸ, ಶಿಲ್ಪಕಲೆ, ಚಿತ್ರಕಲೆ, ವಾಸ್ತು, ಸಂಸ್ಕೃತಾಭ್ಯಾಸ ವೇದಾಗಮ, ಜ್ಯೋತಿಷ್ಯ ಇವುಗಳೆಲ್ಲದರಲ್ಲೂ

ಸಿದ್ಧಹಸ್ತರಾಗಿದ್ದರು. ಎಲ್ಲಾ ಕಲಾಪ್ರಕಾರಗಳ ಜ್ಞಾನದ ಜೊತೆ, ಸಂಸ್ಕೃತ, ವೇದಾಧ್ಯಯನ, ಭಾಷಾಪಾಂಡಿತ್ಯವನ್ನು ಪಡೆದು ಸ್ತಪತಿ ಎಂದು ಕರೆಯಿಸಿಕೊಳ್ಳುವುದರಲ್ಲಿ ಬಹುಶಃ ಇವರೇ ಕೊನೆಯವರು ಎಂದರೆ ತಪ್ಪಾಗಲಾರದು. ಇವರ ವಂಶಸ್ತರು ಹಾಗೂ ಇವರ ಹಲವು ಶಿಷ್ಯಂದಿರು ಜಗದ್ವಿಖ್ಯಾತ ಶಿಲ್ಪ ಕಲಾವಿದರಾಗಿರುವುದು ನಿಜವಾದರೂ, ಶಿಲ್ಪಿ ಶ್ರೀ ಸಿದ್ಧಲಿಂಗಸ್ವಾಮಿಗಳ ಮಟ್ಟದಲ್ಲಿ ಒಬ್ಬ ಚಿತ್ರಗಾರನಾಗಿ, ಶಿಲ್ಪಿಯಾಗಿ, ವಾಸ್ತುಶಾಸ್ತ್ರ ಪಂಡಿತನಾಗಿ, ಭಾಷಾತಜ್ಞನಾಗಿ, ವೇದಧ್ಯಯನಪಾರಂಗತನಾಗಿ ಸಕಲ ವಿದ್ಯಾಪ್ರವೀಣನಾಗಿ ಸ್ತಪತಿಯೆನಿಸಿ ಕೊಳ್ಳುವ ಶಿಲ್ಪಿಗಳು ಇತ್ತೀಚಿನ ದಿನಗಳಲ್ಲಿ ಕಂಡುಬರುವುದಿಲ್ಲ. ಈ ಒಂದು ಬದಲಾವಣೆ ದೃಶ್ಯಕಲಾ ಕ್ಷೇತ್ರದಲ್ಲಿ ಮಾತ್ರವಲ್ಲ ವೈದ್ಯಕೀಯ, ವಿದ್ಯಾಭ್ಯಾಸ, ನಾಟ್ಯ, ಸಂಗೀತ, ಯೋಗ ಭಾರತೀಯ ಪರಂಪರಾಗತವಾಗಿ ಬಂದ ಎಲ್ಲಾ ವಿದ್ಯೆಗಳಲ್ಲೂ ಇದನ್ನು ಕಾಣಬಹುದು. ಬಹುಶಃ ಇದು ಈ ಕಾಲಘಟ್ಟದ ಒಂದು ಸತ್ಯವಿರಬಹುದು.

ಚಾಮರಾಜನಗರ ಬೆಂಡರವಾಡಿ ಎಂಬ ಗ್ರಾಮದಲ್ಲಿ ಸಿದ್ಧಪ್ಪಾಜಿ ಸ್ವಾಮಿ ಮತ್ತು ಮಲ್ಲಾಜಮ್ಮಣ್ಣಿ ಎಂಬ ದಂಪತಿಗಳಿಗೆ ಪುತ್ರರಾಗಿ 1885ರಲ್ಲಿ ಜನಿಸಿದ ಮಗುವಿಗೆ, ಈ ಊರಿಗೆ ಆಕಸ್ಮಿಕವಾಗಿ ಬಂದ ನಂಜುಂಡ ಶಿವಯೋಗಿಂದ್ರ ಸ್ವಾಮಿಗಳು ಸಿದ್ಧಲಿಂಗಸ್ವಾಮಿ ಎಂದು ನಾಮಕರಣ ಮಾಡಿದರು. ಚಲಕನವಾಡಿಯ ಶಂಭುಲಿಂಗೇಶ್ವರ ಬೆಟ್ಟ ನಿಜಗುಣಶಿವಯೋಗಿಗಳ ತಪೋಭೂಮಿಯಾಗಿತ್ತು. ಈ ಕ್ಷೇತ್ರದ ಮಹಿಮೆಯನ್ನು ಸಿದ್ಧಲಿಂಗಸ್ವಾಮಿಗಳು ಬಾಲ್ಯದಿಂದಲೂ ಹಿರಿಯರಿಂದ ಕೇಳಿ ತಿಳಿದಿದ್ದರು. ಇದರ ಜೊತೆ ಇವರಿಗೆ ನಂಜುಂಡ ಶಿವಯೋಗಿಗಳ ಮೇಲಿನ ಅತೀವ ಭಕ್ತಿ ಅದೇ ಜಾಗದಲ್ಲಿ ತಾನೂ ತಪವನ್ನಾಚರಿಸಬೇಕೆಂದು ಪ್ರೇರೇಪಿಸಿತು. ಸಿದ್ಧಲಿಂಗಸ್ವಾಮಿಗಳು ತನ್ನ ಹದಿನೆಂಟನೇ ವಯಸ್ಸಿನಲ್ಲಿ ಶಂಭುಲಿಂಗೇಶ್ವರ ಬೆಟ್ಟದ ಮೇಲಿನ ಒಂದು ಗುಹೆಯಲ್ಲಿ ಕುಳಿತು ಏಕಾಗ್ರಚಿತ್ತರಾಗಿ ತಪಸ್ಸನ್ನಾಚರಿಸಿದ ಗುಹೆಯಲ್ಲಿ ದಕ್ಷಿಣಾ ಮೂರ್ತಿ ಮತ್ತು ನಂದಿಕೇಶ್ವರನ ಮೂರ್ತಿಯನ್ನು ಕಡೆದು ಅಲ್ಲಿಯೇ ಅದನ್ನು ಪ್ರತಿಸ್ಥಾಪಿಸಿದರೆಂದೂ, ಇದು ಅವರು ಸ್ವತಂತ್ರವಾಗಿ ರಚಿಸಿದ ಪ್ರಥಮ ಮೂರ್ತಿ ಎಂದೂ ತಿಳಿದುಬರುತ್ತದೆ. ಆಲದ ಮರದಡಿಯಲ್ಲಿ ಕುಳಿತ ವೀಣಾಪಾಣಿ ದಕ್ಷಿಣಾಮೂರ್ತಿ ಚತುರ್ಬಾಹುಗಳನ್ನು ಹೊಂದಿದ್ದಾನೆ. ಮುಂಗಾಲುಗಳು ಪರಸ್ಪರ ಸಂಧಿಸುವಂತೆ ಕತ್ತರಿಗಾಲಲ್ಲಿ ಕುಳಿತ ಮುದ್ರೆಯಲ್ಲಿದೆ. ಯೋಗಪಟ್ಟಿ ಮೊಣಕಾಲು ಮತ್ತು ದೇಹವನ್ನು ಬಂಧಿಸಿದೆ. ಪಾದಗಳ ಕೆಳ ಭಾಗದಲ್ಲಿ ಋಷಿಮುನಿಗಳ ಕೆತ್ತನೆಯಿದೆ. ಆ ಮುನಿಗಳು ವಸಿಷ್ಠ, ಭೃಗು, ಜಮದಗ್ನಿ, ಭಾರದ್ವಾಜ, ಶೌನಕ ಮತ್ತು ಅಗಸ್ತ್ಯನೆಂದು ಕಾಶ್ಯಪ ಶಿಲ್ಪಶಾಸ್ತ್ರದ ಮೂಲಕ ತಿಳಿದುಬರುತ್ತದೆ. ಹಾಗೆಯೇ ಅದರ ಪಕ್ಕದಲ್ಲಿ ನಂದೀಶ್ವರನ ಮೂರ್ತಿಯಿದೆ. ಮಾನವ ದೇಹ, ಹಸುವಿನ ತಲೆ ಮತ್ತು ಚತುರ್ಬಾಹುಗಳನ್ನು ಹೊಂದಿದೆ ಎಂದು ಮುಂತಾಗಿ ಎಲ್. ಶಿವಲಿಂಗಪ್ಪನವರು ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಕಟಿಸಿದ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ದಲಿಂಗಸ್ವಾಮಿಗಳು ಎಂಬ ಪುಸ್ತಕಕ್ಕೆ ಬರೆದ ಲೇಖನದಲ್ಲಿ ನಮೂದಿಸಿರುತ್ತಾರೆ. ಅನಂತರ ಗುರುಗಳ ಅಪೇಕ್ಷೆ ಮೇರೆಗೆ ಬೆಂಡರವಾಡಿ ಗ್ರಾಮದ ಪಟೇಲ್ ಚೆನ್ನದೇವಸ್ವಾಮಿ ಎಂಬುವರ ಪುತ್ರಿ ವೀರಮ್ಮ ಎಂಬ ಕನ್ಯೆಯನ್ನು ವಿವಾಹವಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದರು.

ಸಿದ್ಧಲಿಂಗಸ್ವಾಮಿಯವರು ವಂಶಪಾರಂಪರ್ಯವಾಗಿ ಬಂದ ವೇದ, ಶಿಲ್ಪ, ಮಂತ್ರ, ಶಾಸ್ತ್ರ, ಜ್ಯೋತಿಷ್ಯ ಮುಂತಾದ ವಿದ್ಯೆಗಳನ್ನು ತಮ್ಮ ತಂದೆಯಿಂದ ಮತ್ತು ಪ್ರಸಿದ್ಧ ಶಿಲ್ಪಿಗಳೂ, ಮಂತ್ರ, ತಂತ್ರ ಶಾಸ್ತ್ರವೇತ್ತರೂ ಆದ ದೊಡ್ಡಪ್ಪ ಸಿದ್ಧಲಿಂಗಸ್ವಾಮಿಗಳಿಂದಲೂ ಅಭ್ಯಾಸ ಮಾಡಿದರು. ಇವರ ತಂದೆ ಮತ್ತು ದೊಡ್ಡಪ್ಪನವರು ಸ್ವರ್ಗಸ್ತರಾದ ಮೇಲೆ ಇವರ ಗುರುಗಳಾದ ನಂಜುಂಡ ಶಿವಯೋಗಿಂದ್ರಸ್ವಾಮಿಗಳು ಇವರನ್ನು ಆಶೀರ್ವದಿಸಿ ಪ್ರೋತ್ಸಾಹಿಸಿದರು. ಸಿದ್ಧಲಿಂಗಸ್ವಾಮಿಗಳ ಗುರುಗಳಾದ ನಂಜುಂಡ ಶಿವಯೋಗಿಗಳು ನವಿಲಗುಂದ ಶ್ರೀ ನಾಗಲಿಂಗಸ್ವಾಮಿಗಳ ಮಠದಲ್ಲಿದ್ದು, ದೀರ್ಘ ತಪಸ್ಸಾನ್ನಾಚರಿಸಿ ಮೈಸೂರು ಜಿಲ್ಲೆಗೆ ಬಂದರು. ಮೈಸೂರಿನಲ್ಲಿ ಇವರ ಪವಾಡಗಳು ಅರಮನೆಯವರೆಗೂ ಮುಟ್ಟಿ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಅಜ್ಜಿ ಶ್ರೀ ನಂಜುಂಡಸ್ವಾಮಿಗಳ ಶಿಷ್ಯೆಯಾದರು. ಚಾಮರಾಜನಗರ, ಕೊಳ್ಳೆಗಾಲ ಕಡೆಗಳಲ್ಲಿ ಸುತ್ತಾಡುತ್ತಿದ್ದ ನಂಜುಂಡ ಶಿವಯೋಗಿಗಳು ಸಿದ್ಧಲಿಂಗಸ್ವಾಮಿಯ ಅಂತರಂಗಶುದ್ಧಿ, ನಿಷ್ಠೆ, ಭಕ್ತಿ ಕಂಡು ಮೆಚ್ಚಿ ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ಇವರಿಗೆ ಬ್ರಹ್ಮೋಪದೇಶ ಮಾಡಿದರು. ನಂಜುಂಡಸ್ವಾಮಿಗಳಿಗೆ ಅರಮನೆಯಲ್ಲಿ ಸಾಕಷ್ಟು ಗೌರವ ಸನ್ಮಾನಗಳಿದ್ದುದರಿಂದ ರಾಜಾಶ್ರಯ ಪಡೆದು ತಮ್ಮ ಗುರುಗಳಾದ ನವಿಲಗುಂದ ಶ್ರೀ ನಾಗಲಿಂಗಸ್ವಾಮಿಗಳ ಒಂದು ಶಾಖಾ ಮಠವನ್ನು ಮೈಸೂರಿನ ಅಗ್ರಹಾರದಲ್ಲಿ ಸ್ಥಾಪಿಸಿ, ಆ ಮಠಕ್ಕೆ ಸಿದ್ಧಲಿಂಗಸ್ವಾಮಿಯವರನ್ನು ಮಠಾಧೀಶರನ್ನಾಗಿ ನೇಮಿಸಿ ಆಶೀರ್ವದಿಸಿದರು. ( ಈ ಮಠವನ್ನು ಸ್ಥಾಪಿಸುವ ಮೊದಲು ಸಿದ್ಧಲಿಂಗಸ್ವಾಮಿಯವರು ಮೈಸೂರಿನ ಮಂಡಿಮೊಹಲ್ಲಾದಲ್ಲಿರುವ ಪಾಪಮ್ಮನ ಛತ್ರದಲ್ಲಿದ್ದು ಅಲ್ಲಿ ಬಹಳಷ್ಟು ಶಿಲಾಮೂರ್ತಿಗಳನ್ನು ರಚಿಸಿದ್ದರೆಂದು ತಿಳಿದುಬರುತ್ತದೆ.) ನಂಜುಂಡ ಶಿವಯೋಗಿಗಳು ದೈವಖ್ಯರಾದ ಮೇಲೆ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಅಜ್ಜಿಯವರ ಅಪೇಕ್ಷೆಯಂತೆ ಮೈಸೂರಿನ ಚಾಮುಂಡಿಬೆಟ್ಟದ ತಪ್ಪಲಿನಲ್ಲಿ ನಂಜುಂಡ ಶಿವಯೋಗಿಯವರ ಪಾರ್ಥಿವಶರೀರವನ್ನು ಸಮಾಧಿ ಮಾಡಿ ಅಲ್ಲಿ ಗದ್ದುಗೆ ಕಟ್ಟಿಸಲಾಯಿತು. ಶಿಲ್ಪಿ ಸಿದ್ಧಲಿಂಗಸ್ವಾಮಿಗಳು ಶಿವಲಿಂಗ ಮತ್ತು ನಂಜುಂಡ ಶಿವಯೋಗಿಗಳ ಭಾವಮೂರ್ತಿಯನ್ನು ಕಡೆದು ಇಲ್ಲಿ ಪ್ರತಿಷ್ಠಾಪಿಸಿದರು.

## ಶ್ರೀ ಸಿದ್ಧಲಿಂಗಸ್ವಾಮಿಯವರು- ಮಠಾಧೀಶರಾಗಿ

ಶ್ರೀ ಸಿದ್ಧಲಿಂಗಸ್ವಾಮಿಯುವರು ಮಠದಲ್ಲಿ ಪಟ್ಟಾಭೀಷಕ್ತರಾದ ಮೇಲೆ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು ಅವರನ್ನು ಜ್ಞಾನಗುರುವಾಗಿ ಸ್ವೀಕರಿಸಿದರು. ಒಡೆಯರ್‌ರವರು ಯಾವುದೇ ಕೆಲಸಕಾರ್ಯಗಳನ್ನು ಮಾಡುವಾಗ ಸ್ವಾಮಿಗಳ ಮಾರ್ಗದರ್ಶನ ಪಡೆದು ಅವರ ಅಪ್ಪಣೆಯಂತೆ ನಡೆದುಕೊಳ್ಳುತ್ತಿದ್ದರು. ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಸೋದರಮಾವ ಶ್ರೀ ಮುದ್ದೇರಾಜೇ ಅರಸ್‌ರವರು ಸ್ವಾಮಿಗಳ ಸನ್ನಿಧಾನಕ್ಕೆ ಆಗಿಂದಾಗ್ಗೆ ಬರುತ್ತಿದ್ದು, ಅರಮನೆಗೆ ಮತ್ತು ರಾಜ ಕುಟುಂಬಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಚರ್ಚೆಮಾಡಿ ಸ್ವಾಮಿಗಳ ಮಾರ್ಗದರ್ಶನವನ್ನು ಪಡೆಯುತ್ತಿದ್ದರು. ಮಠಕ್ಕೆ ಬೇಕಾದ ಎಲ್ಲಾ ಸೌಖರ್ಯಗಳನ್ನು ಬಹಳ ಶ್ರದ್ಧೆಯಿಂದ ಅರಮನೆಯಿಂದ ಮಾಡಲಾಗುತ್ತಿತ್ತು. ಪ್ರತಿನಿತ್ಯ ಬೆಳಿಗ್ಗೆ ಸ್ವಾಮಿಗಳ ಪೂಜಾನಂತರ ಪಾದೋದಕವನ್ನು, ಮಧ್ಯಾಹ್ನ ಮಹಾ ನೈವೇದ್ಯ ಮತ್ತು

ಸಾಯಂಕಾಲ ಪಂಚಾಮೃತ ನೈವೇದ್ಯವನ್ನು ಮಾಡಿ ಪ್ರಸಾದವನ್ನು ಹಾಗೂ ರಾತ್ರಿ ಸುಮಾರು ಹತ್ತು ಗಂಟೆಗೆ ಶ್ರೀ ಸಿದ್ಧಲಿಂಗಸ್ವಾಮಿಗಳು ನೈವೇದ್ಯ ಸ್ವೀಕರಿಸಿದ ಮೇಲೆ ಶೇಶಪ್ರಸಾದವನ್ನು ಅರಮನೆಗೆ ಕಳುಹಿಸಿಕೊಡಲಾಗುತ್ತಿತ್ತು. ಇದರ ಜೊತೆ ಮುದ್ದೇರಾಜೇ ಅರಸರ ಮುಖಾಂತರ ಅವಶ್ಯವಿದ್ದ ಸಲಹೆ ಸೂಚನೆಗಳನ್ನು ಆಶೀರ್ವಾದದೊಂದಿಗೆ ಲಿಖಿತ ಮುಖೇನ ಅರಮನೆಗೆ ಕಳುಹಿಸಿಕೊಡಲಾಗುತ್ತಿತ್ತು. ಈ ಎಲ್ಲಾ ಕೆಲಸ ಕಾರ್ಯಗಳಿಗೆಂದೇ ಅರಮನೆಯ ಒಂದು ಕಾರು ಸದಾ ಮಠದ ಎದುರಲ್ಲಿ ನಿಂತಿರುತ್ತಿತ್ತೆಂದು ಮೈಸೂರಿನ ಹಿರಿಯ ಕಲಾವಿದರು ಈವತ್ತೂ ಜ್ಞಾಪಿಸಿಕೊಳ್ಳುತ್ತಾರೆ.

ಶ್ರೀಮಾನ್ ಜಯಚಾಮರಾಜೇಂದ್ರ ಒಡೆಯರ್‌ರವರು ಯಾವುದೇ ವಿಶೇಷವಾದ ಸಲಹೆ ಸೂಚನೆಗಳು ಬೇಕಾದಲ್ಲಿ ತಾವೇ ಸ್ವತಹಾ ಮಠಕ್ಕೆ ಬರುತ್ತಿದ್ದರು. ಮಹಾರಾಜರು ಮಾತ್ರವಲ್ಲದೆ ಮೈಸೂರಿನ ಮತ್ತು ಹೊರ ರಾಜ್ಯಗಳಿಂದ ವಿದ್ವಾಂಸರು, ಗಾಯಕರು, ಕಲಾಕಾರರು, ಆಡಳಿತರೂಢ ವ್ಯಕ್ತಿಗಳಿಂದ ಸಾಮಾನ್ಯ ಜನರವರೆಗೆ ಎಲ್ಲರೂ ಬೇರೆ ಬೇರೆ ಕಾರಣಗಳಿಗೋಸ್ಕರ ಇವರ ಬಳಿಗೆ ಬಂದು ಇವರ ಆಶೀರ್ವಾದ ಪಡೆದುಹೋಗುತ್ತಿದ್ದರು. ಈ ಮಠದಲ್ಲಿ ಪ್ರತೀ ವರ್ಷ ನಡೆಯುತ್ತಿದ್ದ ಆರಾಧನಾ ಮೆರವಣಿಗೆ ಒಂದು ಚಿಕಣಿ ದಸರಾ ಮೆರವಣಿಗೆಯಂತೆ ವಿಜೃಂಭಣೆಯಿಂದ ನಡೆಯುತ್ತಿತ್ತೆಂದು ಅಗ್ರಹಾರದ ಸುತ್ತಮುತ್ತ ಇರುವ ಹಿರಿಯರು ನಮ್ಮ ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾರೆ. ಆರಾಧನಾ ಸಂದರ್ಭದಲ್ಲಿ ಮೆರವಣಿಗೆ ಹೊರಡುವ ಮೊದಲು ಮಹರಾಜರು ಸ್ವಾಮಿಗಳಿಗೆ ಪ್ರಥಮ ಪೂಜೆ ಸಲ್ಲಿಸುತ್ತಿದ್ದರು. ಅಂದು ಸ್ವಾಮಿಗಳು ಕಷಾಯವಸ್ತ್ರಧಾರಿಗಳಾಗಿ, ಹಣೆಯಲ್ಲಿ ತ್ರಿಮುಂಢಭಸ್ಮಧಾರಣೆ, ಗಂಧ, ಕಿರೀಟಾಧಾರಿಯಾಗಿ ಕೈಯಲ್ಲಿ ಚಿನ್ನದ ಹಿಡಿಬೆತ್ತ, ಕಮಂಡಲದೊಂದಿಗೆ ಸರ್ವಾಲಂಕಾರಗಳೊಂದಿಗೆ, ಅರಮನೆಯ ಗೌರವ ಸಂಕೇತಗಳಾದ ಬಿರುದುಬಾವಲಿ, ಕೊಂಬು ಕಹಳೆಗಳೊಂದಿಗೆ, ಇಕ್ಕೆಲಗಳಲ್ಲಿ ಅಶ್ವಾರೂಢ ಸಿಪಾಯಿಗಳನ್ನೊಳಗೊಂಡ ಮೆರವಣಿಗೆಯಲ್ಲಿ ಮೇನೆಯಲ್ಲಿ (ಪಲ್ಲಕಿ) ಆಸೀನರಾಗಿ ಹೊರಟ ಸ್ವಾಮಿಗಳನ್ನು ನೋಡುವುದೇ ಒಂದು ಮಹಾಭಾಗ್ಯ ಎಂದು ಅಂದಿನ ದಿನಗಳನ್ನು ನೆನೆದು ಹಿರಿಯರು ಮನದುಂಬಿ ಹೇಳುತ್ತಾರೆ. ಈ ವೈಭವದ ದಿನಗಳನ್ನು ತಾವೇನಾದರೂ ಕಂಡಿದ್ದೀರಾ ಎಂದು ಮೈಸೂರಿನ ಹಿರಿಯ ಕಲಾವಿದರಾದ ಶ್ರೀಯುತ ಕುಪ್ಪಾಚಾರಿಯವರನ್ನು ಕೇಳಿದಾಗ ಅವರು ತುಂಬಾ ಭಾವುಕರಾಗಿ ವಿವರಿಸತೊಡಗಿದರು. ಎಲ್ಲಾ ಸಂದರ್ಭಗಳಲ್ಲೂ ಮಹಾರಾಜರು ಮುಂದಿದ್ದು ಉಳಿದವರೆಲ್ಲಾ ಕೈಕಟ್ಟಿಕೊಂಡು ಅವರ ಹಿಂದಿನಿಂದ ಅವರನ್ನು ಅನುಸರಿಸುವುದು ವಾಡಿಕೆ. ಆದರೆ ಶ್ರೀ ಸಿದ್ಧಲಿಂಗಸ್ವಾಮಿಗಳ ಜೊತೆ ಮಹಾರಾಜರಿರುವಾಗಲೆಲ್ಲಾ ಸ್ವಾಮಿಗಳು ಮುಂದಿದ್ದು ಅವರ ಹಿಂದೆ ಮಹಾರಾಜರು ಅವರನ್ನು ಅನುಸರಿಸುತ್ತಿದ್ದರು. ಆರಾಧನಾ ಮೆರವಣಿಗೆಯ ದಿನ ಪ್ರಥಮ ಪೂಜೆ ಸಲ್ಲಿಸಿದ ಮಹಾರಾಜರು ಸ್ವಾಮಿಗಳನ್ನು ಮೇನೆಯಲ್ಲಿ ಕುಳ್ಳಿರಿಸಿ ಗೌರವಸೂಚಕವಾಗಿ ಮೇನೆಗೆ ಹೆಗಲುಕೊಟ್ಟು ಒಂದೆರಡು ಹೆಜ್ಜೆ ನಡೆದು ಮುಂದೆ ಹೋಗುತ್ತಿದ್ದರಂತೆ. ಶ್ರೀ ಸಿದ್ಧಲಿಂಗಸ್ವಾಮಿಯವರನ್ನು ಹೊತ್ತುಕೊಂಡು ಹೊರಟ ಈ ಮೆರವಣಿಗೆಯು ಮೈಸೂರಿನ ಪ್ರಮುಖ ಬೀದಿಗಳಲ್ಲಿ ಹಾದು ಮಂಡಿಮೊಹಲ್ಲಾದಲ್ಲಿರುವ ಶ್ರೀ ಕಾಳಿಕಾಂಬ ಕಮಟೇಶ್ವರ ದೇವಸ್ಥಾನದಲ್ಲಿ ಪೂಜೆಯನ್ನು ಅರ್ಪಿಸಿ ಪುನಃ ಮಠಕ್ಕೆ ವಾಪಾಸಾಗುತ್ತಿತ್ತು. ಜಗದ್ವಿಖ್ಯಾತ ಮೈಸೂರು ದಸರಾದ ನವರಾತ್ರಿಯ ನವದಿನಗಳಂದು

ಮೈಸೂರು ಮಹಾರಾಜರು ಸ್ವರ್ಣಖಚಿತ ಸಿಂಹಾಸನದಲ್ಲಿ ಸಿಂಹಾಸನರೂಢರಾಗುವ ಮೊದಲು ಸ್ವಾಮಿಗಳಿಂದ ಆಶೀರ್ವಾದ ಪಡೆದು ಸಿಂಹಾಸನವನ್ನೇರುತ್ತಿದ್ದರು. ಅವರ ಪಕ್ಕದಲ್ಲಿಯೇ ರಜತ ಪೀಠದಲ್ಲಿ ಸ್ವಾಮಿಗಳು ಆಸೀನರಾಗುತ್ತಿದ್ದರು. ಸಿದ್ಧಲಿಂಗಸ್ವಾಮಿಯವರ ಅಂತಿಮ ದಿನಗಳಲ್ಲಿ ಸ್ವಾಮಿಗಳ ತಮ್ಮ, ಶ್ರೀ ಅಪ್ಪಾಜಿಸ್ವಾಮಿಯವರ ಪುತ್ರ ಮಹಾದೇವಸ್ವಾಮಿಯವರಿಗೆ ಪೀಠಾಧ್ಯಕ್ಷಪಟ್ಟವನ್ನು ಶಾಸ್ತ್ರೋಕ್ತವಾಗಿ ಮಾಡಿಸಿ ತಮ್ಮ ಪುತ್ರ ನಾಗೇಂದ್ರ ಸ್ತಪತಿಯವರಿಗೆ ಸರ್ವಾಧಿಕಾರವನ್ನು ನೀಡಿದರು.

## ಶ್ರೀ ಸಿದ್ಧಲಿಂಗಸ್ವಾಮಿಯವರು – ಆಚಾರ್ಯರಾಗಿ

ಮೈಸೂರಿನ ಮಹಾರಾಜರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು ಕಲೆ ಮತ್ತು ಸಾಹಿತ್ಯಕ್ಕೆ ನೀಡಿದ ಪ್ರಾಶಸ್ತ್ಯ ಉಲ್ಲೇಖಾರ್ಹವಾದುದು. ಅಂದಿನ ದಿನಗಳಲ್ಲಿ ಮೈಸೂರಿನ ಹೆಚ್ಚಿನ ಆಡಳಿತಾತ್ಮಕ ಕೆಲಸ ಕಾರ್ಯಗಳನ್ನು ಅಧಿಕಾರಿಗಳೇ ಮಾಡುತ್ತಿದ್ದು ಮಹಾರಾಜರಿಗೆ ಈ ಒತ್ತಡಗಳಿಲ್ಲದಿರುವುದರಿಂದಲೂ, ಸ್ವತಃ ಮಹಾರಾಜರು ಕಲಾಸಕ್ತರಾಗಿರುವುದರಿಂದಲೂ ಕಲೆ ಮತ್ತು ಸಾಹಿತ್ಯಕ್ಕೆ ಇವರು ಬಹಳ ಪ್ರೋತ್ಸಾಹ ಕೊಡುತ್ತಿದ್ದರು. ಇದರ ಫಲವಾಗಿಯೇ 1913ರಲ್ಲಿ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಕೇಂದ್ರವು ಕೈಗಾರಿಕೆ ತಾಂತ್ರಿಕ ವಿಭಾಗದ ಒಂದು ಅಂಗಸಂಸ್ಥೆಯಾಗಿ ಪ್ರಾರಂಭವಾಗಿ ಇಲ್ಲಿ ತಾಂತ್ರಿಕ ವಿಷಯಗಳ ಜೊತೆ ಕರಕುಶಲ ಕಲೆಗಳಲ್ಲೂ ತರಬೇತಿ ಕೊಡಲಾಗುತ್ತಿತ್ತು. 1932ರಲ್ಲಿ ಈ ತಾಂತ್ರಿಕ ಶಿಕ್ಷಣ ಕೇಂದ್ರದಲ್ಲಿ ಒಂದು ಲಲಿತ ಕಲಾವಿಭಾಗವನ್ನು ತೆರೆಯಲಾಯಿತು. ಇಲ್ಲಿ ಸ್ವಲ್ಪ ಬದಲಾವಣೆಗಳೊಂದಿಗೆ ಆಗ ಜೆ.ಜೆ. ಕಲಾ ಶಾಲೆಯಲ್ಲಿ ರೂಢಿಯಲ್ಲಿದ್ದ ಬ್ರಿಟೀಷ್ ಮಾದರಿಯ ತರಬೇತಿಯನ್ನೇ ಕೊಡಲಾಗುತ್ತಿತ್ತು. ಮೈಸೂರಿನಲ್ಲೊಂದು ಸಾಂಪ್ರದಾಯಿಕ ಶಿಲ್ಪ ಕಲಾ ಶಾಲೆಯನ್ನು ಶ್ರೀ ಸಿದ್ಧಲಿಂಗಸ್ವಾಮಿಗಳ ಆಶೀರ್ವಾದ ಮತ್ತು ಮಾರ್ಗದರ್ಶನದೊಂದಿಗೆ ಪ್ರಾರಂಭಿಸಬೇಕೆಂದು ಮಹಾರಾಜರು ನಿರ್ಧರಿಸಿದರು. ಸ್ವಾಮಿಗಳ ಮಠದ ಮುಂದೆ ಆನೆಗಳನ್ನು ಸಾಕುತ್ತಿದ್ದ ಆನೆ ಕರೋಟಿಯೆಂಬ ಜಾಗ ಅರಮನೆಗೆ ಸೇರಿತ್ತು. ಇಲ್ಲಿ ಸಾಂಪ್ರದಾಯಿಕ ಶಿಲ್ಪಕಲಾ ಶಾಲೆಯನ್ನು ಸ್ಥಾಪಿಸುವುದು ಸೂಕ್ತವೆಂಬ ಸ್ವಾಮಿಗಳ ಸೂಚನೆಯಂತೆ ಈ ಜಾಗದಲ್ಲಿನ ಸುಮಾರು ಮೂರು ಎಕರೆಯಷ್ಟು ಜಾಗವನ್ನು ಮಠಕ್ಕೆ ದಾನ ರೂಪದಲ್ಲಿ ಹಸ್ತಾಂತರಿಸಲಾಯಿತು. ಆ ಜಾಗದಲ್ಲಿ ವೇದಾಗಮ, ಸಂಸ್ಕೃತ, ಶಿಲ್ಪಶಾಸ್ತ್ರದ ಅಧ್ಯಯನಕ್ಕಾಗಿ ಭವ್ಯವಾದ ಗುರುಕುಲವನ್ನು ಸ್ಥಾಪಿಸಲಾಯಿತು. ಈ ಗುರುಕುಲಾಶ್ರಮದ ಮಧ್ಯದಲ್ಲಿ ವೃತ್ತಾಕಾರದ ಕಾರಂಜಿಯನ್ನು ನಿರ್ಮಿಸಿ, ಕಾರಂಜಿಯ ಮಧ್ಯಭಾಗದಲ್ಲಿ ಮೂರು ಹಂತಗಳಿರುವ ಪೀಠವನ್ನು ನಿರ್ಮಿಸಲಾಗಿದೆ. ಈ ಪೀಠದ ತುತ್ತತುದಿಯಲ್ಲಿ ಬ್ರಹ್ಮನ ಶಿಲ್ಪವಿದ್ದು ಅದರ ಮುಡಿಯ ಮೇಲೆ ನೀರಿನ ಬುಗ್ಗೆಯನ್ನು ಅಳವಡಿಸಲಾಗಿದೆ. ಅದರ ಕೆಳಗಿನ ಹಂತದಲ್ಲಿ ಸದ್ಯೋಜಾತ, ವಾಮದೇವ, ಅಘೋರತತ್ಪುರುಷ ಮತ್ತು ಬ್ರಹ್ಮನ ಶಿಲ್ಪಗಳಿವೆ. ಅದಕ್ಕಿಂತ ಕೆಳಗಿನ ಹಂತದಲ್ಲಿ ಸುತ್ತಲೂ 108 ಶಿವಲಿಂಗಗಳನ್ನು ಇಡಲಾಗಿದೆ. ಕಾರಂಜಿಯ ಸುತ್ತ ನಾಲ್ಕು ಬಸವನ ಶಿಲ್ಪಗಳಿವೆ. ಎಲ್ಲಕ್ಕಿಂತ ಮೇಲಿನ ಹಂತದಲ್ಲಿರುವ ಬ್ರಹ್ಮನ ತಲೆಯ ಮೇಲೆ ಅಳವಡಿಸಲಾಗಿರುವ ನೀರಿನ ಬುಗ್ಗೆಯಿಂದ ಚಿಮ್ಮುವ ನೀರು (ಗಂಗೆ) ಪದಜ್ಯೋತ ಬ್ರಹ್ಮರ ಮೇಲಿನಿಂದ ಹರಿದು ಕೆಳಗಿನ ನೂರ ಎಂಟು ಶಿವಲಿಂಗಗಳಿಗೆ

ಅಭಿಷೇಕ ಮಾಡಿ ಅಲ್ಲಿಂದ ಹರಿದ ನೀರು ಕಾರಂಜಿಯಲ್ಲಿ ಶೇಖರಣೆಯಾಗುವಂತೆ ರಚಿಸಲಾಗಿದೆ. ಈ ಕಾರಂಜಿಯ ಸುತ್ತಲೂ ವಿದ್ಯಾರ್ಥಿಗಳಿಗೆ ತಮ್ಮ ಶಿಲ್ಪಕಲಾ ಅಭ್ಯಾಸವನ್ನು ಮಾಡಲು ಅನುಕೂಲವಾಗುವಂತೆ ಸಾಕಷ್ಟು ಖಾಲಿ ಜಾಗವನ್ನು ಬಿಟ್ಟು ಸುತ್ತಲೂ ಗುರುಕುಲಕ್ಕೆ ಬೇಕಾದ ವಿಶಾಲವಾದ ಕಟ್ಟಡವನ್ನು ನಿರ್ಮಿಸಲಾಗಿದೆ. 1949 ಮಾರ್ಚ್ ತಿಂಗಳ ಏಳನೇ ತಾರೀಖಿನಂದು ಶ್ರೀ ಜಗದ್ಗುರು ಶೈವಶಿಲ್ಪಿ ಬ್ರಹ್ಮರ್ಷಿ ಗುರುಕುಲ ಎಂಬ ನಾಮಧೇಯದೊಂದಿಗೆ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು ಇದರ ಪ್ರಾರಂಭೋತ್ಸವವನ್ನು ಬಹಳ ವಿಜೃಂಭಣೆಯಿಂದ ನೆರವೇರಿಸಿದರು. ಶ್ರಿ ಗುರುಕುಲದಲ್ಲಿ ವೇದಾಧ್ಯಯನಕ್ಕೆ ಬ್ರ ಶ್ರೀ ವೆಂಕಟರಾವ್‌ರವರು, ಸಂಸ್ಕೃತಭ್ಯಾಸಕ್ಕೆ ವೇ. ಬ್ರ ಶ್ರೀ ಗಂಗಾಧರ ಶಾಸ್ತ್ರಿಯವರು, ವೇದ ಮತ್ತು ಶಿಲ್ಪಶಾಸ್ತ್ರಕ್ಕೆ ಸ್ವತಹಾ ಶಿಲ್ಪಿ ಸಿದ್ಧಲಿಂಗ ಸ್ವಾಮಿಗಳೇ ಅಧ್ಯಾಪಕರುಗಳಾಗಿದ್ದರು. ಇಲ್ಲಿ ಶಿಲ್ಪಕಲೆಯ ಜೊತೆ ರೇಖಾಚಿತ್ರ ಮತ್ತು ಜಲವರ್ಣದ ಚಿತ್ರ ರಚನಾ ವಿಧಾನವನ್ನು ಕೂಡ ಹೇಳಿಕೊಡಲಾಗುತ್ತಿತ್ತು. ಅವರು ಕೈ ಕೆಲಸದ ಜೊತೆ ವೇದ, ಶಾಸ್ತ್ರ, ಪುರಾಣಗಳಿಗೆ ಕೊಡುತ್ತಿದ್ದ ಆದ್ಯತೆ, ಅವರ ಸಂಗ್ರಹದಲ್ಲಿದ್ದ ಗ್ರಂಥ ಭಂಡಾರವನ್ನು ನೋಡಿದರೇ ತಿಳಿಯುತ್ತಿತ್ತು. ಅವುಗಳ ಸತತ ಅಧ್ಯಯನ, ವಿದ್ಯಾರ್ಥಿಗಳಿಗೆ ಮಾರ್ಗದರ್ಶನ, ಕಲ್ಲಿನ ಮೂರ್ತಿಗಳ ಕೆತ್ತನೆ, ಚಿನ್ನಾಭರಣಗಳ ತಯಾರಿ, ಚಿತ್ರರಚನೆ, ಮಾತ್ರವಲ್ಲದೆ ಇವುಗಳ ಜೊತೆ ಕಟ್ಟುನಿಟ್ಟಾದ ಪೂಜೆ, ಸಾಮೂಹಿಕ ಪ್ರಾರ್ಥನೆ ಇವು ಸ್ವಾಮಿಗಳ ಮತ್ತು ಗುರುಕುಲದ ದಿನನಿತ್ಯದ ಚಟುವಟಿಕೆಗಳಾಗಿದ್ದವು. ಇಲ್ಲಿರುವ ಚಿತ್ರಶಾಲೆಯಲ್ಲಿ ನಾನಾಬಗೆಯ ನಾನಾ ವರ್ಣಗಳ ಕಲಾಕೃತಿಗಳು ತುಂಬಿವೆ. ಇಲ್ಲಿರುವ ಶಿಲ್ಪ ವಿದ್ಯಾಲಯದಲ್ಲಿ ಸಿದ್ಧಲಿಂಗಸ್ವಾಮಿಗಳು ರಚಿಸಿದ ನೂರಾರು ಶಿಲ್ಪಕೃತಿಗಳಿವೆಯೆಂದು ಮೈಸೂರಿನ ಪ್ರಸಾರಾಂಗದ ಪ್ರಕಟಣೆಗೆ ದಿ॥ ಪಿ.ಆರ್. ತಿಪ್ಪೇಸ್ವಾಮಿಯವರು ಬರೆದ ಲೇಖನವನ್ನು ಗಮನಿಸಿದರೆ, ಈ ಗುರುಕುಲದಲ್ಲಿ ನಡೆಯುತ್ತಿದ್ದ ಕಾರ್ಯವೈಖರಿಯನ್ನು ಊಹಿಸಬಹುದಾಗಿದೆ. ಈ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳ ಏಕಮಾತ್ರ ಪುತ್ರರಾದ ನಾಗೇಂದ್ರ ಸ್ಥಪತಿಯವರು ಮತ್ತು ನಾಗಲಿಂಗಸ್ವಾಮಿ ಎಂಬುವರು ಈ ಸಂಸ್ಥೆಯ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಕೆಲವು ಸಮಯದ ನಂತರ ಗುರುಕುಲವನ್ನು ಸರಕಾರದ ನೆರವಿನಿಂದ ಶಿಲ್ಪಕಲಾ ಶಾಲೆಯಾಗಿ ಪರಿವರ್ತಿಸಬೇಕೆಂದು ನಾಗೇಂದ್ರ ಸ್ಥಪತಿಯವರು ನಿರ್ಧರಿಸಿದರು. ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀಯುತ ಬಿ.ಡಿ. ಜತ್ತಿಯವರಿಂದ ಶಿಲ್ಪಕಲಾ ಶಾಲೆಯ ಉದ್ಘಾಟನೆಯನ್ನು ಮಾಡಿಸಲಾಯಿತು. ಮುಂದೆ ಈ ಕಲಾ ಶಾಲೆಯ ಮುಖ್ಯೋಪಾಧ್ಯಾಯರಾಗಿ ಕಾರ್ಯನಿರ್ವಹಿಸಬೇಕೆಂದು ಶ್ರೀಯುತ, ಸಿ. ಪರಮೇಶ್ವರಾಚಾರ್‌ರವರನ್ನು ಕೇಳಿಕೊಳ್ಳಲು ಅವರು ನಿರಾಕರಿಸಿದರೆಂದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಈಗ ಈ ಗುರುಕುಲದ ಕಟ್ಟಡ, ಕಾರಂಜಿ ಎಲ್ಲವೂ ಶಿಥಿಲಗೊಂಡಿದ್ದು, ಸಾಂಪ್ರದಾಯಿಕ ಶಿಲ್ಪಕಲಾ ಅಭ್ಯಾಸದ ಕೇಂದ್ರ ಹಾಗೂ ಪ್ರವಾಸಿಗಳ ಪ್ರೇಕ್ಷಣೀಯಸ್ಥಳವಾಗಬೇಕಾಗಿದ್ದ ಈ ಒಟ್ಟು ಪರಿಸರ ಅವಸಾನದ ಅಂಚಿನಲ್ಲಿದೆ.

## ಶ್ರೀ ಸಿದ್ಧಲಿಂಗಸ್ವಾಮಿಯವರು ಕನ್ನಡ ಪ್ರಿಯರಾಗಿ

ಶ್ರೀ ಸಿದ್ಧಲಿಂಗಸ್ವಾಮಿಗಳ ಸಂಸ್ಕೃತದ ಜ್ಞಾನ ಅಪಾರವಾಗಿತ್ತು. ತಮಿಳು, ತೆಲುಗು ಮತ್ತು

ಇಂಗ್ಲಿಷ್ ತಿಳಿದವರಾಗಿದ್ದರು. ಕನ್ನಡದ ಬಗ್ಗೆಯಂತೂ ಅಪಾರವಾದ ಜ್ಞಾನವನ್ನು ಹೊಂದಿದ್ದರು. ಋಗ್ವೇದ ಸಂಹಿತ ಎಂಬ ಋಗ್ವೇದದ ಕನ್ನಡ ಅನುವಾದವು 25 ಭಾಗಗಳಲ್ಲಿ ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾದ ಮೂಲಕ ಪ್ರಕಟಗೊಂಡಿದ್ದು, ವೇದ ವಿಮರ್ಶನ ವಿದ್ವನ್ಮಂಡಳಿಯ ಅಧ್ಯಕ್ಷರನ್ನಾಗಿ ಶ್ರೀ ಜಗದ್ಗುರು ನಾಗಲಿಂಗ ಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ ಶಿಲ್ಪಿ ಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗ ಸ್ವಾಮಿಯವರನ್ನು ನೇಮಿಸಲಾಗಿತ್ತು. ಭಾಷಾಂತರಕಾರ ಮತ್ತು ಸಂಪಾದಕರಾಗಿ ಆಸ್ಥಾನ ಮಹಾವಿದ್ವಾನ್ ಹೆಚ್.ಪಿ.ವೆಂಕಟರಾವು ಇವರನ್ನು ನೇಮಕ ಮಾಡಲಾಗಿತ್ತಲ್ಲದೆ ಹತ್ತು ಜನ ವಿದ್ವಾಂಸರನ್ನೊಳಗೊಂಡ ಸಹಾಯಕ ವಿದ್ವನ್ಮಂಡಳಿಯನ್ನು ರಚಿಸಲಾಗಿತ್ತು. ಈ ಪುಸ್ತಕಕ್ಕೆ ತಾವೇ ಮುಖಪುಟವನ್ನು ತುಂಬಾ ಅರ್ಥವತ್ತಾಗಿ ರಚಿಸಿರುತ್ತಾರೆ. ಐದು ವೇದಗಳ ಸಂಕೇತವಾಗಿ ಪಂಚಮುಖಿ ಬ್ರಹ್ಮ, ಸೃಷ್ಟಿ, ಸ್ಥಿತಿ ಲಯದ ಸಂಕೇತವಾಗಿ ತ್ರಿಮೂರ್ತಿಗಳು, ಶಿಲ್ಪಾಧಿಪತಿಯಾದ ವಿಶ್ವಕರ್ಮರನ್ನು ರಚಿಸಿ ಈ ಗ್ರಂಥಕ್ಕೆ ಒಂದು ಸುಂದರ ಹಾಗೂ ಅರ್ಥಗರ್ಭಿತವಾದ ರೂಪವನ್ನು ಕೊಟ್ಟಿರುತ್ತಾರೆ. ಶಿಲ್ಪವಿದ್ಯಾರಹಸ್ಯೋಪನಿಷತ್ ಎಂಬ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿರುತ್ತಾರೆ. ಶಿಲ್ಪಸಾರ ಎಂಬುದು ಇವರ ಕವನ ಸಂಕಲನ. ಇದರಲ್ಲಿ ಶಿಲ್ಪಮಹಿಮೆಯನ್ನು ಪದ್ಯರೂಪದಲ್ಲಿ ರಚಿಸಿದ್ದಾರೆ. ಶ್ರೀ ಮತ್ಕೌಮಾರ ಭಾಷ್ಯೋಪೇತ ಶ್ರೀಮಚ್ಛಿಲ್ಪ ವಿದ್ಯಾ ರಹಸ್ಯೋಪನಿಷತ್‌ನ ಕನ್ನಡ ಅನುವಾದವು ವಿದ್ವತ್ಪೂರ್ಣವಾಗಿದೆಯೆಂಬುದು ಬಲ್ಲವರ ಅಂಬೋಣ. ಇವುಗಳು ಮಾತ್ರವಲ್ಲದೆ ಕವನಗಳು, ಶಿಲ್ಪ ಶಾಸ್ತ್ರಕ್ಕೆ ಸಂಬಂಧಿಸಿದ ಇನ್ನೂ ಹಲವು ಸ್ವಂತ ಮತ್ತು ಅನುವಾದಿತ ಕೃತಿಗಳು ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾದ ಮೂಲಕ ಪ್ರಕಟಗೊಂಡಿದೆ ಎಂದು ತಿಳಿದುಬರುತ್ತದೆ.

1950ರಲ್ಲಿ ಸ್ವಾಮಿಗಳವರ ಗುರುಗಳಾದ ಶ್ರೀ ನಂಜುಂಡ ಶಿವಯೋಗೀಶ್ವರರ ಇಪ್ಪತ್ತೈದನೇ ಆರಾಧನಾ ಮಹೋತ್ಸವ ಸಂದರ್ಭದಲ್ಲಿ ಶ್ರೀ ಗುರುಗೀತಾ ಮತ್ತು ಶ್ರೀ ಶಿವಗೀತಾ ಎಂಬ ಎರಡು ಗ್ರಂಥಗಳನ್ನು ಪ್ರಕಟಿಸಲಾಗಿದೆ. ಸಂಸ್ಕೃತ ಕೇವಲ ಕೆಲವೇ ವ್ಯಕ್ತಿಗಳ ಸೊತ್ತಾಗಬಾರದು, ಈ ಜ್ಞಾನ ಆಸಕ್ತರೆಲ್ಲರಿಗೂ ಸಿಗುವಂತಾಗಬೇಕೆಂಬುದೇ ಇವರ ಉದ್ದೇಶವಾಗಿತ್ತು. ಮಹಾರಾಜರ ಅನುಗ್ರಹ ಮತ್ತು ಅನೇಕ ದಾನಿಗಳ ಸಹಕಾರದಿಂದ ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲ ಸುಮಾರು 18 ಮಹಾಪುರಾಣ ಮತ್ತು 18 ಉಪಪುರಾಣಗಳಲ್ಲಿ ಅನೇಕವುಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸಿರುವುದನ್ನು ಕಾಣಬಹುದು. ಅಜಪಾಗಾಯತ್ರಿ ಜಪ ವಿಧಾನಂ ಎಂಬ ಗ್ರಂಥವನ್ನು ಅನುವಾದಿಸಿ ಕರ್ನಾಟಕದ ಕನ್ನಡಿಗರಿಗೆ ಗಾಯತ್ರಿ ಪಠನ ಕನ್ನಡದಲ್ಲಿ ದೊರೆಯುವಂತಾಯಿತು. 1947ರಲ್ಲಿ ಯುವಜನ ಸಂಘವೊಂದನ್ನು ಸ್ಥಾಪಿಸಿ ಇದರ ಮುಖಾಂತರ ಶೈವಶಿಲ್ಪ ಪ್ರಭಾ ಎಂಬ ಪತ್ರಿಕೆ ಹೊರಡಿಸುತ್ತಿದ್ದರು. ಶಿಲ್ಪಾದರ್ಶ : ಎಂಬ ಕಿರುಹೊತ್ತಿಗೆ ಪ್ರಾರಂಭಿಸಿ, ಮನೋನ್ಮಾನ ಪ್ರಮಾಣ, ಹಸ್ತಕಂಬಿಯ ಲಕ್ಷಣ, ನಗರ ನಿರ್ಮಾಣ ಕ್ರಮ, ದೇವಾಲಯ, ಸ್ತೂಪ, ಪ್ರಕಾರ, ಗೋಪುರ, ಪ್ರಸಾದ, ಗೃಹಗಳ ನಿರ್ಮಾಣ ಕ್ರಮ, ಬಿಂಬಗಳ ನಿರ್ಮಾಣ ಇತ್ಯಾದಿ ವಿವರಗಳು ವಿದ್ಯಾರ್ಥಿಗಳಿಗೆ ದೊರೆಯುವಂತೆ ಮಾಡಿದರು.

## ಶ್ರೀ ಸಿದ್ಧಲಿಂಗಸ್ವಾಮಿಯವರು ಸ್ತಪತಿ– ಚಿತ್ರಕಲಾವಿದರಾಗಿ:

19ನೇ ಶತಮಾನದ ಅಂತ್ಯದಿಂದಲೇ ಕರ್ನಾಟಕದ ಕಲೆಯು ಮೂಲಭೂತವಾಗಿ ಬದಲಾದುದನ್ನು ಕಾಣಬಹುದು. ಮೈಸೂರು ಒಡೆಯರ್ ಅವರು ಮಹಾಕಲಾಪೋಷಕರಾಗಿದ್ದು ಕಲಾಕ್ಷೇತ್ರಗಳಲ್ಲಿ ಕಾಲಕಾಲಕ್ಕೆ ಆದ, ಆಗುತ್ತಿದ್ದ ಬದಲಾವಣೆಗಳನ್ನು ಗಮನಿಸುತ್ತಿದ್ದರು. ಮಾತ್ರವಲ್ಲ ಇಂತಹ ಬದಲಾವಣೆಗಳನ್ನು ಪ್ರೋತ್ಸಾಹಿಸುತ್ತಿದ್ದರು ಕೂಡಾ. ಅರಮನೆಗೆ ರವಿವರ್ಮನ ಸಂಪರ್ಕ ಮಾತ್ರವಲ್ಲದೆ ಪಾಶ್ಚತ್ಯ ಕಲಾವಿದರ ಸಂಪರ್ಕ ಕೂಡ ಇತ್ತು. ಅಷ್ಟರಲ್ಲೇ ರವಿವರ್ಮನ ಸುಮಾರು ಹತ್ತು ಕೃತಿಗಳು ಅರಮನೆ ಸೇರಿದ್ದವು. ಕಳೆದ ಶತಮಾನದ ಮಧ್ಯಭಾಗದಲ್ಲಿಯೇ ಮುದ್ರಣ ಕಲೆ ಕೂಡಾ ಭಾರತಕ್ಕೆ ಬಂತು. ಅರಮನೆಯಲ್ಲಿಯೇ ಮುದ್ರಾಕ್ಷರ ಶಾಲೆಯಿದ್ದು, 1860ರಲ್ಲಿ ಕಲ್ಲಚ್ಚಿನಲ್ಲಿ ಮುದ್ರಣವಾದ ಸೌಗಂಧಿಕಾಪರಿಣಯ ಗ್ರಂಥದಲ್ಲಿ ಸುಮಾರು 1200 ಪುಟಗಳಿದ್ದು, ಅದರಲ್ಲಿ ಒಂದು ಸಾವಿರಕ್ಕಿಂತ ಹೆಚ್ಚು ಚಿತ್ರಗಳಿರುತ್ತವೆ. ಇದೇ ಸಂದರ್ಭದಲ್ಲಿ ಮೈಸೂರಿನ ಒಡೆಯರ್‌ರವರು ರವಿವರ್ಮನಿಗೆ ಆಶ್ರಯ ನೀಡಿ ಇವರು ಮೈಸೂರಿನಲ್ಲಿ ಹಲವು ಕಲಾಕೃತಿಗಳನ್ನು ರಚಿಸುವಂತಾಯಿತು. ಇವರ ಜೊತೆ ಕೆಲವು ಪಾಶ್ಚಾತ್ಯ ಕಲಾವಿದರನ್ನು ಕೂಡಾ ಅರಮನೆಗೆ ಆಹ್ವಾನಿಸಿ ಅವರಿಂದ ಕಲಾಕೃತಿಗಳನ್ನು ಮಾಡಿಸಲಾಗುತ್ತಿತ್ತು. ರವಿವರ್ಮನ ಮತ್ತು ಪಾಶ್ಚಾತ್ಯ ಕಲಾವಿದರ ಕಲಾಕೃತಿಗಳು ಸಾಮಾನ್ಯರಿಗೆ ಮಾತ್ರವಲ್ಲ ಕೆಲವು ಸಂದರ್ಭಗಳಲ್ಲಿ ಕಲಾವಿದರಿಗೂ ನೋಡಲು ಅವಕಾಶಗಳಿರಲಿಲ್ಲವಾದರೂ, ರವಿವರ್ಮನ ಕಲಾಕೃತಿಗಳ ಮುದ್ರಿತ ಪ್ರತಿಗಳು ಲಭ್ಯವಿದ್ದುವು. ಇವುಗಳೆಲ್ಲವೂ ಅರಮನೆ ಕಲಾವಿದರ ಮೇಲೆ ಮೈಸೂರಿನ ಇತರೇ ಕಲಾವಿದರ ಕಲಾಕೃತಿಗಳ ರಚನೆಯ ಮೇಲೆ ಮಾತ್ರವಲ್ಲ ಕಲಾಪೋಷಕರು ಮತ್ತು ಸಾಮಾನ್ಯರ ದೃಕ್‌ಗ್ರಹಿಕೆಯ ಮೇಲೆ ಕೂಡಾ ಪ್ರಭಾವ ಬೀರಿತು. ಮೈಸೂರು ಅರಮನೆಯಲ್ಲಿ ಆಗ ಕಲಾವಿದರುಗಳಾದ ದುರ್ಗದ ವೆಂಕಟಪ್ಪ, ದಾಸಪ್ಪ, ಕೃಷ್ಣಪ್ಪ, ಚಿತ್ರಗಾರ ತಿಪ್ಪೋಜಿ, ವೀರಣ್ಣ, ಸುಂದರಯ್ಯ, ನಾಗರಾಜ, ಸುಬ್ರಹ್ಮಣ್ಯ ರಾಜು, ಮಧುಗಿರಿ ನಂಜಪ್ಪ, ಲಿಂಗಪ್ಪ ಜಾವಗಲ್ ನರಸಿಂಹಯ್ಯ, ಗೋಪಾಲ ರಾಜು, ಗೋಪಾಲಯ್ಯ, ಪಿಲಿಕೇಶವ, ಕೇಶವಯ್ಯ, ನಾರಣಪ್ಪ, ಎಸ್.ಆರ್, ಐಯ್ಯಂಗಾರ್, ಶಂಕರ್ ರಾಜು, ಶ. ನಂಜುಂಡಸ್ವಾಮಿ, ಎಮ್.ವಿ. ಅರ್ಖೀಜ್, ಜೆರೋಲ್ಡ್, ವೆಂಕಟಪ್ಪ, ಶಿಲ್ಪಿ ಸಿದ್ಧಲಿಂಗಸ್ವಾಮಿ, ರಾಮನರಸಯ್ಯ ಮುಂತಾದವರು ಹಲವು ಸಂದರ್ಭಗಳಲ್ಲಿ ಕಾರ್ಯನಿರ್ವಹಿಸಿರುತ್ತಾರೆ. ಇವರಲ್ಲಿ ಕೆಲವರು ಹಲವು ವರ್ಷಗಳ ಕಾಲ ರಾಜಾಶ್ರಯದಲ್ಲಿಯೇ ತಮ್ಮ ಕಲಾಕೃತಿಗಳನ್ನು ರಚಿಸುತ್ತಾ ಬಂದರೂ, ಹೆಚ್ಚಿನ ಕಲಾವಿದರು ತುಂಬ ಅಲ್ಪಕಾಲ, ನಿರ್ದಿಷ್ಟ ಕೆಲಸಕ್ಕೋಸ್ಕರ ಮಾತ್ರ ನೇಮಕಗೊಂಡಿದ್ದರು. ಈ ಕಲಾವಿದರುಗಳು ಮಾತ್ರವಲ್ಲದೆ, ಜಯಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ಆ ಸಂದರ್ಭದಲ್ಲಿ ಅಭ್ಯಾಸ ಮಾಡುತ್ತಿದ್ದ ಕೆಲವು ವಿದ್ಯಾರ್ಥಿಗಳು ಈ ಹಿರಿಯ ಅರಮನೆ ಕಲಾವಿದರುಗಳಿಗೆ ಸಹಾಯ ಮಾಡಲು ಆಗಿಂದಾಗ್ಗೆ ಅರಮನೆಗೆ ಹೋಗುತ್ತಿದ್ದರು. ಈ ಹೆಚ್ಚಿನ ಕಲಾವಿದರುಗಳಿಗೆ ರವಿವರ್ಮ ಮತ್ತು ಬ್ರಿಟೀಷ್ ಕಲಾವಿದರ ಕಲಾಕೃತಿಗಳೇ ಮಾದರಿಯಾಗಿದ್ದವು. ( ಇದು ಪೋಷಕರಾದ ಮಹಾರಾಜರ ಇಚ್ಛೆ ಕೂಡಾ ಆಗಿದ್ದಿರಬಹುದು.)

1913ರಲ್ಲಿ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಕೇಂದ್ರವು ಕೈಗಾರಿಕೆ ತಾಂತ್ರಿಕ

ವಿಭಾಗದ ಒಂದು ಅಂಗಸಂಸ್ಥೆಯಾಗಿ ಪ್ರಾರಂಭವಾಗಿ ಇಲ್ಲಿ ತಾಂತ್ರಿಕ ವಿಷಯಗಳ ಜೊತೆ ಕರಕುಶಲ ಕಲೆಗಳಲ್ಲೂ ತರಬೇತಿ ಕೊಡಲಾಗುತ್ತಿತ್ತು. 1932ರಲ್ಲಿ ಈ ತಾಂತ್ರಿಕ ಶಿಕ್ಷಣ ಕೇಂದ್ರದಲ್ಲಿ ಒಂದು ಲಲಿತಕಲಾ ವಿಭಾಗವನ್ನು ತೆರೆಯಲಾಯಿತು. ಇಲ್ಲಿ ಸ್ವಲ್ಪ ಬದಲಾವಣೆಗಳೊಂದಿಗೆ ಆಗ ಜೆ.ಜೆ. ಕಲಾ ಶಾಲೆಯಲ್ಲಿ ರೂಢಿಯಲ್ಲಿದ್ದ ಬ್ರಿಟೀಷ್ ಮಾದರಿಯ ತರಬೇತಿಯನ್ನೇ ಕೊಡಲಾಗುತ್ತಿತ್ತು. ಎನ್.ಈ. ಪಾವಂಜೆಯವರು ಇಲ್ಲಿನ ಸೂಪರಿಂಟೆಂಡೆಂಟ್ ಆಗಿದ್ದರು ಮತ್ತು ಎಸ್. ನಂಜುಂಡಸ್ವಾಮಿ, ವೈ.ಸುಬ್ರಮಣ್ಯರಾಜು, ಎಸ್.ಇ. ಟಂಕಸಾಲೆ ಮುಂತಾದವರು ಅಧ್ಯಾಪಕರುಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಇವರಲ್ಲಿ ಹೆಚ್ಚಿನವರು ಮುಂಬಯಿಯ ಜೆ.ಜೆ.ಕಲಾ ಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಪಡೆದವರಾಗಿದ್ದು ಈ ಶಾಲೆಯ ಒಟ್ಟು ಪಠ್ಯ ಕ್ರಮಣಿಕೆ, ತಂತ್ರಗಾರಿಕೆ ಎಲ್ಲವೂ ಬ್ರಿಟೀಷ್ ಮಾದರಿಯದಾಗಿತ್ತು. ಇವುಗಳೆಲ್ಲದರ ಜೊತೆ ಮೈಸೂರು ದಸರಾದ ಸಂದರ್ಭದಲ್ಲಿ ನಡೆಯುತ್ತಿದ್ದ ಲಲಿತಕಲಾ ವಿಭಾಗದ ಕಲಾಪ್ರದರ್ಶನ ಮತ್ತು ಆಗ ಮಹಾರಾಜರು ನೀಡುತ್ತಿದ್ದ ಚಿನ್ನದ ಪದಕ ಬಹಳ ಪ್ರತಿಷ್ಠೆಯದಾಗಿದ್ದು, ಈ ಪ್ರದರ್ಶನಕ್ಕೆ ದೇಶದ ನಾನಾಕಡೆಗಳಿಂದ ಕಲಾಕೃತಿಗಳು ಬರುತ್ತಿದ್ದು ಮೈಸೂರಿನ ಕಲಾವಿದರು ಇವುಗಳನ್ನು ನೋಡುವಂತಾಯಿತು.

ಈ ವೇಳೆಗಾಗಲೇ ಬ್ರಿಟೀಷ್ ಮಾದರಿಯ, ಮೂರು ಆಯಾಮಗಳ ಭ್ರಮೆಯನ್ನುಂಟು ಮಾಡುವ ತೈಲವರ್ಣದ ಚಿತ್ರಕಲೆ ಮೈಸೂರಿಗೆ ಮತ್ತು ಮೈಸೂರಿನ ಕಲಾವಿದರಿಗೆ ಪರಿಚಯವಾಗಿತ್ತು. ರವಿವರ್ಮನ ಸುಮಾರು ಹತ್ತು ಕಲಾಕೃತಿಗಳು ಮೈಸೂರು ಮಹಾರಾಜರ ಚಿತ್ರಶಾಲೆಯಲ್ಲಿ ಸ್ಥಾನ ಪಡೆದಿತ್ತು. ಮೈಸೂರಿನ ಕಲಾವಿದರು ಒಂದು ವಿಚಿತ್ರ ಸನ್ನಿವೇಶವನ್ನು ಎದುರಿಸುತ್ತಿದ್ದರು. ಒಂದು ಕಡೆ ತಮಗೆ ತುಂಬಾ ಚಿರಪರಿತವಾದ, ಪ್ರತಿಯೊಬ್ಬ ಮೈಸೂರಿಗನ ಮನೆಯ ದೇವರ ಕೋಣೆಯನ್ನು ಅಲಂಕರಿಸುತ್ತಿದ್ದ ಮೈಸೂರು ಶೈಲಿಯ ಚಿತ್ರ , ಇನ್ನೊಂದೆಡೆ ಈ ದೇವರ ಕೋಣೆಗಳನ್ನು ನಿಧಾನವಾಗಿ ಅಷ್ಟೇ ದೃಢವಾಗಿ ಪ್ರವೇಶಿಸುತ್ತಿದ್ದ ರವಿವರ್ಮನ ಓಲಿಯೋಗ್ರಾಫ್ ಮುದ್ರಿತ ಚಿತ್ರಗಳು. ಒಂದು ಕಡೆ ಕಲಾವಿದರು ಒಂದು ತಪಸ್ಸಿನಂತೆ, ಏಕಾಗ್ರಚಿತ್ತದಿಂದ, ಶ್ರದ್ಧೆ ಭಕ್ತಿಗಳಿಂದ ತಮ್ಮ ಕೈಯಿಂದ ರಚಿಸಿದ. ಅತಿಮಾನುಷ ಎನಿಸುವ ಆಕೃತಿಗಳನ್ನು ಹೊಂದಿದ, ಚಿನ್ನದ ರೇಖುಗಳಿಂದ ಜಗಜಗಿಸುವ, ನಮ್ಮನ್ನು ಸಂಪೂರ್ಣ ಭ್ರಮಾಲೋಕಕ್ಕೊಯ್ದು, ದೈವೀಭಾವವನ್ನು ನಮ್ಮ ಅಂತರ್ಯದಲ್ಲಿ ಹುಟ್ಟಿಸುವ ಮೈಸೂರು ಶೈಲಿಯ ಚಿತ್ರಗಳಾದರೆ, ಇನ್ನೊಂದೆಡೆ ಮಹಾರಾಜರಿಂದ ಹೊಗಳಿಸಿಕೊಳ್ಳುತ್ತಿರುವ, ಇದರಿಂದಾಗಿ ಸಾರ್ವಜನಿಕರಿಂದ ಗೌರವಿಸಲ್ಪಟ್ಟಿರುವ, ಕಾರ್ಖಾನೆಯಲ್ಲಿ ತಯಾರಾದ, ಯಾವನೋ ಪಕ್ಕದ ಮನೆಯವನನ್ನು, ಪಕ್ಕದ ಸನ್ನಿವೇಶವನ್ನು ಹೋಲುವ ರವಿವರ್ಮನ ಮುದ್ರಿತ ಚಿತ್ರಗಳು, ಒಂದುಕಡೆ ಗಾಢವಾದ ಬಣ್ಣಗಳ ಛಾಯೆ, ಲಾಲಿತ್ಯ ಪೂರ್ಣವಾದ ರೇಖೆಗಳು, ಕಣ್ಸೆಳೆತ್ತದೆ ಮತ್ತೆ ಮತ್ತೆ ನೋಡಬೇಕೆನಿಸುವ ಮನೋದೃಗ್ಗೋಚರವಾದ ಕಲಾವಿದನ ನೈಪುಣ್ಯದಿಂದ ಕೂಡಿದ ಮೈಸೂರು ಶೈಲಿಯ ಪುಟ್ಟ ಪುಟ್ಟ ಚಿತ್ರಗಳನ್ನು ಕಂಡರೆ, ಇನ್ನೊಂದೆಡೆ, ದೊಡ್ಡ ದೊಡ್ಡ ಕ್ಯಾನ್ವಾಸ್‌ಗಳಲ್ಲಿ, ಹೊರದೇಶಗಳಿಂದ ಆಮದಾದ ತೈಲ ವರ್ಣಗಳಲ್ಲಿ ರಚಿಸಿದ, ರಾಜಮಹಾರಾಜರುಗಳ ವೈಭವೀಕರಿಸಿದ, ನಮ್ಮ ಪರಂಪರೆಗೆ, ನಮ್ಮ ದೃಶ್ಯ ಸಂವೇದನೆಗಳಿಗೆ ಹೊಸತೆನಿಸಿದ ಯಥಾವತ್ ದೃಗ್ ಗೋಚರ, ನೈಜ ಶೈಲಿಯ, ನಾವು ನೋಡುತ್ತಿರುವ

ಚಿತ್ರದ ದೃಶ್ಯ ನಿಜವೇನೋ ಎನಿಸುವಷ್ಟು ಭ್ರಮೆಯನ್ನುಂಟುಮಾಡುವ, ಆ ಮಾಧ್ಯಮದ ಮತ್ತು ಆ ಚಿತ್ರಪ್ರಕಾರದ ಗುಣಗಳನ್ನು ಹೊಂದಿದ, ಅತಿಯೆನಿಸುವಷ್ಟು ದಪ್ಪಗಿನ ಚೌಕಟ್ಟುಗಳನ್ನು ಹೊಂದಿದ ರವಿವರ್ಮನ ಮತ್ತು ಬ್ರಿಟಿಷ್ ಕಲಾವಿದರು ರಚಿಸಿದ ಚಿತ್ರಗಳನ್ನು ಏಕಕಾಲದಲ್ಲಿ ಕಾಣಲು ಸಾಧ್ಯವಿತ್ತು. ಈ ಹೊಸ ಮಾಧ್ಯಮದ ಬಗ್ಗೆ ತಿಳಿಯಬೇಕು, ಈ ತಂತ್ರವನ್ನು ಕಲಿಯಬೇಕು ಎಂಬ ಹುಮ್ಮಸ್ಸು ಆಗಿನ ಎಲ್ಲಾ ಕಲಾವಿದರಲ್ಲಿತ್ತು.

ಹೊಸ ಮಾಧ್ಯಮ, ಹೊಸತಂತ್ರಗಾರಿಕೆ, ಹೊಸ ವಸ್ತು, ವಿಷಯಗಳು ಮತ್ತು ಹೊಸ ದೃಕ್ ಸಂವೇದನೆಗಳು ರೂಪುಗೊಳ್ಳುತ್ತಿದ್ದ ಈ ಸಂಕ್ರಮಣದ ಕಾಲದಲ್ಲೇ ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ಮೈಸೂರಿನಲ್ಲಿದ್ದು, ಮಠಾಧಿಪತಿಗಳಾಗಿ, ಸ್ವಾಮಿಗಳಾಗಿ, ಆಚಾರ್ಯರಾಗಿ, ವಿದ್ವಾಂಸರಾಗಿ, ಸಂಘಟಕರಾಗಿ, ಚಿತ್ರಕಲಾವಿದರಾಗಿ, ಶಿಲ್ಪಿಗಳಾಗಿ ಮೈಸೂರಿನ ಒಟ್ಟು ಕಲೆ ಮತ್ತು ಚಟುವಟಿಕೆಗಳಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಮೈಸೂರಿನ ಮಹಾರಾಜರಿಂದ ಸೈ ಎನಿಸಿಕೊಂಡ ಕೆಲವೇ ಕೆಲವು ಕಲಾವಿದರಲ್ಲಿ ಒಬ್ಬರು. ಅರಮನೆಯ ಕಲಾವಿದರಲ್ಲಿ ಇವರನ್ನು ಮೆಚ್ಚದವರು ಹಲವರಿದ್ದರೂ ಇವರನ್ನು ನಿರ್ಲಕ್ಷಿಸುವುದು ಅಸಾಧ್ಯವಾಗಿತ್ತು. ಮೈಸೂರು ಅರಮನೆಯ ದರ್ಬಾರ್ ಹಾಲಿನ ಒಳಾಂಗಣದ ಓರಣಕ್ಕೆಂದೇ ನಿರ್ದಿಷ್ಟ ಅಳತೆಗಳಲ್ಲಿ ರವಿವರ್ಮ ರಚಿಸಿದ ಭೀಷ್ಮ ಪ್ರತಿಜ್ಞೆ, ಶ್ರೀ ರಾಮ ಸಾಗರದರ್ಪಹರಣ, ಜಟಾಯು ವಧೆ, ಮೇಘನಾಥನ ವಿಜಯ, ಶ್ರೀ ಕೃಷ್ಣಸಂಧಾನ, ಶ್ರೀ ಕೃಷ್ಣ ಬಲರಾಮರು ಮಾತಾಪಿತರನ್ನು ಸೆರೆಮನೆಯಿಂದ ಬಿಡಿಸುತ್ತಿರುವುದು, ದಮಯಂತಿ ಮತ್ತು ದ್ರೌಪದಿಯನ್ನೊಳಗೊಂಡಂತೆ ಒಟ್ಟು ಎಂಟು ಪೇನಲ್‌ಗಳನ್ನು ತೆಗೆದು ಆ ಜಾಗದಲ್ಲಿ ಸಿದ್ಧಲಿಂಗಸ್ವಾಮಿಯವರು ರಚಿಸಿದ ಕಾಳಿಕಾದೇವಿ, ನವದುರ್ಗಾದೇವಿ, ಮಹಿಷಾಸುರ ಮರ್ದಿನಿ, ಸರಸ್ವತಿ, ಲಕ್ಷ್ಮಿ, ಭುವನೇಶ್ವರಿ, ಗಾಯಿತ್ರಿ, ರಾಜರಾಜೇಶ್ವರಿ, ಚಿತ್ರಗಳನ್ನು ಸ್ಥಾಪಿಸಲಾಗಿದೆ. ಒಂಬತ್ತನೆಯ ಚಿತ್ರ ಮನೋಣ್ಮಯಿ ಸ್ವಾಮಿಯವರ ಅನಾರೋಗ್ಯದ ಕಾರಣ ಪೂರ್ಣಗೊಳ್ಳದಿರುವುದರಿಂದ ಆ ಜಾಗದಲ್ಲಿ ರವಿವರ್ಮ ರಚಿಸಿದ ಕಲಾಕೃತಿಯೇ ಉಳಿಯುವಂತಾಯಿತು. ಮಹಾರಾಜರು ದೇವಿಯ ಉಪಾಸಕರಾಗಿದ್ದುದರಿಂದ ಸುಮಾರು 1955ರಲ್ಲಿ ಈ ಬದಲಾವಣೆಯನ್ನು ಮಾಡಲಾಯಿತೆಂದು ಹೇಳಲಾಗುತ್ತದಾದರೂ, ಮಹಾರಾಜರಿಗೆ ಸ್ವಾಮಿಯವರ ಮೇಲಿದ್ದ ಗೌರವ ಮಾತ್ರವಲ್ಲ ಮಹಾರಾಜರ ಮನವೊಲಿಸಬೇಕಾದರೆ ಸ್ವಾಮಿಯವರಿಗೆ ಆ ಸಂದರ್ಭದಲ್ಲಿ ಮೈಸೂರು ಅರಮನೆಯಲ್ಲಿದ್ದ ವಶೀಲಿಯನ್ನು ಊಹಿಸಬಹುದಾಗಿದೆ. ಸಿದ್ಧಲಿಂಗಸ್ವಾಮಿಯವರನ್ನು ಒಬ್ಬ ಶಿಲ್ಪಿಯೆಂದೇ ಹೆಚ್ಚಾಗಿ ಗುರುತಿಸಲಾಗಿದೆ. ಇವರು ಶಿಲ್ಪಿಯಷ್ಟೇ ಶ್ರೇಷ್ಠಮಟ್ಟದ ಚಿತ್ರಕಲಾವಿದರೂ ಹೌದು ಎಂಬುದಕ್ಕೆ ಅರಮನೆಯ ದರ್ಬಾರ್ ಹಾಲಿನಲ್ಲಿರುವ ಈ ಕಲಾಕೃತಿಗಳೇ ಸಾಕ್ಷಿ. ಇವರ ಹೆಚ್ಚಿನ ಕಲಾಕೃತಿಗಳು ಈಗ ಲಭ್ಯವಿಲ್ಲವಾದರೂ ಅವರ ಪ್ರೌಢಿಮೆಯನ್ನು ಗುರುತಿಸಲು ಈಗ ಲಭ್ಯವಿರುವ ಕಲಾಕೃತಿಗಳೇ ಸಾಕು. ಇವುಗಳಲ್ಲಿ ಅತಿ ಮುಖ್ಯವಾದವುಗಳೆಂದರೆ ಅರಮನೆಯ ದರ್ಬಾರ್ ಹಾಲಿನಲ್ಲಿರುವ ಅಷ್ಟ ದುರ್ಗೆಯರ ಕಲಾಕೃತಿಗಳು. ( ನವದುರ್ಗೆಯರನ್ನು ರಚಿಸಲು ಉದ್ದೇಶಿಸಿದ್ದು ಕೊನೆಯದು ಅಪೂರ್ಣವಾದುದರಿಂದ ಅದನ್ನು ಅವುಗಳ ಜೊತೆ ಸ್ಥಾಪಿಸಲಿಲ್ಲವಂತೆ)

"ಸ್ವಾಮಿಗಳ ಚಿತ್ರಗಳನ್ನಾಗಲೀ, ಶಿಲ್ಪಗಳನ್ನಾಗಲೀ ವಿಶ್ವಕರ್ಮಪ್ರಣೀತ ಶಾಸ್ತ್ರದಿಂದ ಹೊರಗಿಟ್ಟು ಶುದ್ಧ ಕಲೆಯನ್ನಾಗಿ ನೋಡುವುದು ಸಾಧ್ಯವಾಗಲಾರದು, ವಿಶೇಷವಾಗಿ ಕಾಶ್ಯಪ ಶಿಲ್ಪ ಶಾಸ್ತ್ರದ ಆಧಾರದ ಮೇಲೆ ಮೂರ್ತರೂಪಗೊಂಡಿದೆ ಎಂಬುದನ್ನು ಅಲ್ಲಗಳೆಯಲಾಗದು" ಎಂದು ಎಲ್ ಶಿವಲಿಂಗಪ್ಪನವರು ತಾವು ಶಿಲ್ಪಕಲಾ ಅಕಾಡೆಮಿಗೆ ಬರೆದ ಲೇಖನದಲ್ಲಿ ಅಭಿಪ್ರಾಯ ಪಟ್ಟಿರುವುದನ್ನು ಇಲ್ಲಿ ಗಮನಿಸಬಹುದು. ಸ್ವಾಮಿಗಳು ರಚಿಸಿದ ಹೆಚ್ಚಿನ ಶಿಲ್ಪಗಳು ಮತ್ತು ಚಿತ್ರಗಳು ದೇವ ದೇವತೆಯರಿಗೆ ಸಂಬಂಧಪಟ್ಟಿರುವುದು ಮಾತ್ರವಲ್ಲ, ಇವರ ಹೆಚ್ಚಿನ ವಿಗ್ರಹಗಳು ದೇವತಾ ವಿಗ್ರಹಗಳಾಗಿದ್ದು ಪೂಜಾರ್ಹವಾಗಿರುವುದು ಅನಿವಾರ್ಯವಾಗಿತ್ತು. "ಪ್ರತಿಮೆಗಳ ಉದ್ದೇಶ ಧ್ಯಾನಯೋಗ ಸಹಾಯಕವಾಗಿರಬೇಕಾಗಿರುವುದರಿಂದ ಶಿಲ್ಪಿಯಾದವನು ಧ್ಯಾನಿಯೂ ಆಗಿರಬೇಕು" ಎಂದು ಶುಕ್ರನೀತಿ ಹೇಳಿರುವುದು ಸ್ವಾಮಿಗಳ ಸಂದರ್ಭದಲ್ಲಿ ತುಂಬಾ ಸಮಂಜಸವೆಂದೆನಿಸುತ್ತದೆ. ಇವರು ರಚಿಸಿದ ಹೆಚ್ಚಿನ ಚಿತ್ರಕೃತಿಗಳು ಕೂಡಾ ಇದೇ ಉದ್ದೇಶ ಮತ್ತು ಸಿದ್ಧಾಂತಗಳಿಂದ ನಿರ್ಮಾಣಗೊಂಡವುಗಳಾಗಿವೆ. ಇವರ ಕೆಲವು ಕೃತಿಗಳು ಕೂಡಾ ಮಹಾರಾಜಾ ಪ್ರೇಮ್ ವರ್ಕ್‌ನಿಂದ ಪ್ರಕಟಣೆಗೊಂಡಿದ್ದು ಹಲವರ ದೇವರ ಮನೆಗಳನ್ನು ಸೇರಿವೆ. ಇವುಗಳನ್ನು ಗಮನಿಸಿದಾಗ ಎಲ್ಲೋ ಒಂದು ಕಡೆ ಇವರು ರವಿವರ್ಮನನ್ನು ಮೆಚ್ಚಿಕೊಳ್ಳುತ್ತಲೇ ರವಿವರ್ಮನನ್ನು ಚಾಲೆಂಜ್ ಮಾಡುತ್ತಿದ್ದರೇನೋ ಎಂದು ಅನಿಸದಿರದು.

ಒಂದು ಶಿಲ್ಪ ಅಥವಾ ಚಿತ್ರ ರಚನೆಯಾಗುವಾಗ ಕಲಾಕೃತಿಯ ಉದ್ದೇಶ ಕಲಾಕಾರನಿಗೆ ತಿಳಿದಿರಬೇಕು. ಯಾವುದೇ ಪೂಜಾರ್ಹ ದೇವ ದೇವತೆಯರ ಚಿತ್ರ, ಶಿಲ್ಪ ರಚಿಸುವಾಗ ಆ ಚಿತ್ರದ ಸಂಪೂರ್ಣ ಜ್ಞಾನವನ್ನು ಕಲಾವಿದನು ಹೊಂದಿದವನಾಗಿರಬೇಕು. ಇಂತಹ ಕಲಾಕೃತಿಗಳನ್ನು ಒಬ್ಬ ಸಾಮಾನ್ಯ ನೋಡುಗ ನೋಡುವ ದೃಷ್ಟಿಕೋನಕ್ಕೂ ಒಬ್ಬ ನಿರ್ದಿಷ್ಟ ಧರ್ಮದ, ನಿರ್ದಿಷ್ಟ ಹಿನ್ನೆಲೆಯ ದೈವರಾಧಕ ಆ ಕಲಾಕೃತಿಯನ್ನು ನೋಡುವುದಕ್ಕೂ ಅಜಗಜಾಂತರ ವ್ಯತ್ಯಾಸವಿರುತ್ತದೆ. ನೋಡುಗ ಒಂದು ಕಲಾಕೃತಿಯನ್ನು ನೋಡುವಾಗ ಆ ಕಲಾಕೃತಿಯ ಕಲಾಕಾರನ ನಿರ್ದಿಷ್ಟ ಉದ್ದೇಶ ತಿಳಿದಿದ್ದು, ಆ ಉದ್ದೇಶದ ಕಡೆಗೆ ಒಲವಿದ್ದು ನೋಡಿದರೆ ಆತನಿಗೆ ಸಿಗುವ ದೃಶ್ಯಾನುಭವಕ್ಕೂ, ಇದಕ್ಕೆ ವ್ಯತಿರಿಕ್ತವಾದ ಸಂದರ್ಭದಲ್ಲಿ ನೋಡಿದರೆ ಸಿಗುವ ದೃಶ್ಯಾನುಭವಕ್ಕೂ ತುಂಬಾ ಅಂತರವಿರುವ ಸಾಧ್ಯತೆಯಿದೆ. ಇದು ಎಲ್ಲಾ ಕಲಾಪ್ರಕಾರಗಳಿಗೂ, ಎಲ್ಲಾ ಕಾಲದಲ್ಲೂ ಅನ್ವಯವಾಗುವಂತಹದು. ಒಬ್ಬ ಕಲಾ ಪ್ರಿಯನಿಗೆ ಒಂದು ಚಿತ್ರಕೃತಿಯು ಒಂದು ಭೌತಿಕವಾದ, ಸುಂದರವಾದ, ತನಗೆ ತುಂಬಾ ಹಿಡಿಸಿದ, ಅಥವಾ ಅದಕ್ಕೆ ಪೂರ್ಣ ವ್ಯತಿರಿಕ್ತವಾದ ಒಂದು ಕಲಾಕೃತಿಯೆನಿಸಬಹುದು. ಆದರೆ ಒಬ್ಬ ಧಾರ್ಮಿಕ ಶ್ರದ್ಧಾ ವ್ಯಕ್ತಿಗೆ ಅದೇ ಕೃತಿಯು ಒಂದು ಪೂಜಾರ್ಹ, ತನ್ನನ್ನು ಭೌತಿಕದಿಂದ ಪಾರಮಾರ್ಥಿಕದೆಡೆಗೆ ಕೊಂಡೊಯ್ಯುವ ಒಂದು ಅಧ್ಬುತ ಶಕ್ತಿಯಾಗಿರಬಹುದು. ಈ ದೃಷ್ಟಿಯಿಂದ ಸಿದ್ಧಲಿಂಗಸ್ವಾಮಿಗಳು ರಚಿಸಿದ ಅಷ್ಟದುರ್ಗೆಯರ ಕಲಾಕೃತಿಗಳು ತುಂಬಾ ಕಲಾತ್ಮಕವಾಗಿ, ವೈಶಿಷ್ಯ ಪೂರ್ಣವಾಗಿದೆಯೆನ್ನುವುದಕ್ಕಿಂತ, ಇವುಗಳೆಲ್ಲಾ ಧ್ಯಾನ ಶ್ಲೋಕ ಆಧಾರವಾಗಿ ನಿರ್ಮಿಸಲ್ಪಟ್ಟಿವೆಯೆನ್ನುವುದೇ ಸೂಕ್ತ ಎಂದೆನಿಸುತ್ತದೆ. ಈ ಕಲಾಕೃತಿಗಳನ್ನು ರಚಿಸುವಾಗ ಕಲಾವಿದನ ಮತ್ತು ಪೋಷಕನ ಉದ್ದೇಶ ನೋಡುಗನಿಗೆ ಭಕ್ತಿ ಹುಟ್ಟಿಸುವುದು

ಮುಖ್ಯವಾಗಿರುತ್ತದೆ. ಇಂತಹ ಕಲಾಕೃತಿಗಳನ್ನು ಧಾರ್ಮಿಕ ವ್ಯಕ್ತಿಗಳು, ವಿದ್ವಾಂಸರು, ಕಲಾಪೋಷಕರು ಕೇವಲ ಒಂದು ಕಲಾಕೃತಿಯೆಂದು ನೋಡದೆ, ಇದನ್ನೊಂದು ಮತ, ಧರ್ಮದ ಸಂಕೇತವನ್ನಾಗಿ ನೋಡಲಾಗುತ್ತದೆ. ಇಂತಹ ಕಲಾಕೃತಿಗಳಲ್ಲಿ ಕಲಾವಿದನ ಕಲಾಕೃತಿ ರಚನಾ ನೈಪುಣ್ಯಕ್ಕಿಂತ ಅವನು ಪ್ರತಿಪಾದಿಸಿದ ಧಾರ್ಮಿಕ ಉದ್ದೇಶ ಸಾಫಲ್ಯ ಮುಖ್ಯವಾಗುತ್ತದೆ. ಹಲವು ಸಂದರ್ಭಗಳಲ್ಲಿ ಕಲಾವಿದ ಊಹಿಸದೇಯಿರುವ ಹಲವು ಧಾರ್ಮಿಕ ಆಯಾಮಗಳನ್ನು ಈ ಪ್ರಕಾರದ ಚಿತ್ರಕ್ಕೆ ಆರೋಪಿಸಿ ವೈಭವೀಕರಿಸಿರುವುದನ್ನು ಕೂಡಾ ಕಾಣಬಹುದು.

ಸುಮಾರು 19ನೇ ಶತಮಾನದ ಅಂತ್ಯ ಮತ್ತು 20 ನೇ ಶತಮಾನದ ಆದಿಯಲ್ಲಿ ಛಾಯಾಚಿತ್ರ, ಮುದ್ರಣಯಂತ್ರ ಮುಂತಾದ ಸಾಧನಗಳು ನಾಡಿಗೆ ಬಂದಾಗ ಸಹಜವಾಗಿ ನಾಡಿನ ಒಟ್ಟುಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳಾದಾಗ ಜನರ ನಂಬಿಕೆಗಳು, ಆಚಾರ ವಿಚಾರಗಳು, ರೀತಿ ನೀತಿಗಳೂ ಬದಲಾಗುವುದು ಸಹಜ. ಒಂದು ಕಾಲದಲ್ಲಿ ಮನೆ ಮಠಗಳಲ್ಲಿ ಗುಡಿ ದೇಗುಲಗಳ ಪೂಜಾಕೋಣೆಗಳಲ್ಲಿ ಪೂಜೆಗೊಳ್ಳುತ್ತಿದ್ದ ಕಲಾವಿದ ನಿರ್ಮಿಸಿ ಸ್ಥಾಪಿಸಿದ ದೇವಾನುದೇವತೆಗಳ ಚಿತ್ರಪಟಗಳ ಬದಲಾಗಿ, ಮಾರುಕಟ್ಟೆಯಲ್ಲಿ ಮುದ್ರಿತ ಸಿದ್ಧಪಟಗಳು ದೊರೆಯುವಂತಾಗಿ ಇವುಗಳು ದೇವರಕೋಣೆಗಳನ್ನು ಸೇರುವಂತಾದವು. ಒಂದು ಕಾಲದಲ್ಲಿ ಪುತ್ರಾಪೇಕ್ಷಿಗಳಾಗಿ, ವಿವಾಹಾಪೇಕ್ಷಿಗಳಾಗಿ ಸಂಕಲ್ಪ ಮಾಡಿ, ಉತ್ತಮ ಕಲಾವಿದನಲ್ಲಿ ಬಾಲಕೃಷ್ಣನ, ಗಿರಿಜಾ ಕಲ್ಯಾಣದಂತಹ ಚಿತ್ರಗಳನ್ನು ಶಾಸ್ತ್ರೋಕ್ತವಾಗಿ ರಚಿಸಿ, ಅವುಗಳನ್ನು ತಮ್ಮ ದೇವರಕೋಣೆಗಳಲ್ಲಿ ಸ್ಥಾಪಿಸಿ ದಿನನಿತ್ಯ ಪೂಜೆ ಪುನಸ್ಕಾರಗಳನ್ನು ಮಾಡಿ ತಮ್ಮ ಇಷ್ಟಸಿದ್ಧಿ ಮಾಡಿಕೊಳ್ಳುವ ಕಾಲ ಗತಿಸಿ, ತಮಗೆ ಇಷ್ಟವಾದ ದೇವದೇವತೆಯರ ಮುದ್ರಿತ ಸಿದ್ಧಚಿತ್ರಗಳನ್ನು ಮನೆ ಮಠಗಳಲ್ಲಿ ಪೂಜಿಸುವ ಪದ್ಧತಿ ನಾಡನ್ನು ಆವರಿಸುತ್ತಿತ್ತು. ಇಂದಿಗೂ ಮೈಸೂರು ಮತ್ತು ಸುತ್ತಮುತ್ತಲ ಹಳೆಯ ಮನೆಗಳಲ್ಲಿ ವಂಶಪಾರಂಪರ್ಯವಾಗಿ ಪೂಜಿಸುತ್ತಾ ಬಂದಿರುವ ಕಲಾವಿದರಿಂದ ರಚಿತವಾದ ಮೈಸೂರು ಶೈಲಿಯ, ತಂಜಾವೂರು ಶೈಲಿಯ, ಇನ್ನು ಕೆಲವೆಡೆ ತೈಲವರ್ಣದ ಮೂಲ ಕೃತಿಗಳನ್ನು ಕಾಣಬಹುದು. ಮೈಸೂರಿನಲ್ಲಿರುವ ರಾಮಮಂದಿರದಲ್ಲಿ ಸುಮಾರು ಆರು ಅಡಿ ಎತ್ತರ ನಾಲ್ಕು ಅಡಿ ಅಗಲದ ರಾಮಲಕ್ಷ್ಮಣರ ತೈಲವರ್ಣದಲ್ಲಿ 1930ರಲ್ಲಿ ರಚಿಸಿದ ಮೂಲ ಕಲಾಕೃತಿ ಇಂದಿಗೂ ದಿನನಿತ್ಯ ಪೂಜಿಸಲ್ಪಡುತ್ತಿದೆ. ರವಿವರ್ಮನ ಮುದ್ರಿತ ದೇವದೇವತೆಯರ ಚಿತ್ರಗಳು ಮಾರುಕಟ್ಟೆಗೆ ಬಂದು ದಿನದಿಂದ ದಿನಕ್ಕೆ ಇದಕ್ಕೆ ಬೇಡಿಕೆ ಹೆಚ್ಚಾಯಿತು. ಬೆಂಗಳೂರಿನಲ್ಲಿನ ಮಹಾರಾಜ ಫ್ರೇಮ್ ವರ್ಕ್ಸ್ ಇಂತಹ ಕ್ಯಾಲೆಂಡರ್‌ಗಳನ್ನು ಮುದ್ರಿಸಿ ಮಾರುಕಟ್ಟೆಗಳಿಗೆ ಬಿಡುಗಡೆಮಾಡುತ್ತಿತ್ತು. ಕಲಾವಿದರೆಲ್ಲಾ ತಮ್ಮ ಕಲಾಕೃತಿಗಳೂ ಮುದ್ರಿತವಾಗಲೆಂದು ಮುಗಿಬೀಳುತ್ತಿದ್ದರು. (ಮುಂದೆ ಇಂತಹ ಕಲಾವಿದರನ್ನು ಅವನು ಕ್ಯಾಲೆಂಡರ್ ಆರ್ಟಿಸ್ಟ್ ಎಂದು ಲೇವಡಿ ಮಾಡುತ್ತಿದ್ದ ದಿನಗಳೂ ಒಂದಿತ್ತು). ಇದರಿಂದ ಹಣ ಮತ್ತು ಖ್ಯಾತಿ ಎರಡೂ ಏಕಕಾಲಕ್ಕೆ ಸಿಗುತ್ತಿತ್ತು. ಈ ಸಂದರ್ಭದಲ್ಲಿ ಸಿದ್ಧಲಿಂಗಸ್ವಾಮಿಗಳು ರಚಿಸಿದ ಕೆಲವು ಕಲಾಕೃತಿಗಳು ಮಹಾರಾಜ ಫ್ರೇಮ್ ವರ್ಕ್ಸ್‌ನಿಂದ ಮುದ್ರಿಸಲ್ಪಟ್ಟಿವೆ. ಮೂಲ ಕೃತಿಗಳು ಲಭ್ಯವಾಗದ ಕಾರಣ, ಕ್ಯಾಲೆಂಡರ್ ಮುದ್ರಿತ ಕೃತಿಗಳನ್ನೇ ಈ ಸಂದರ್ಭದಲ್ಲಿ ಬಳಸಲಾಗಿದೆ.

ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು 1928ರಲ್ಲಿ ರಚಿಸಿದ ಕೈಲಾಸ ಶಂಕರ ಮಹಾರಾಜಾ ಫ್ರೇಮ್ ವರ್ಕ್ಸ್‌ರವರು ಮುದ್ರಿಸಿದ ಸ್ವಾಮಿಗಳ ಮೊದಲ ಕ್ಯಾಲೆಂಡರ್ ಕೃತಿ. ಮುಡಿಯಲ್ಲಿ ಗಂಗೆ ಮತ್ತು ಚಂದ್ರರನ್ನು ಹೊತ್ತುಕೊಂಡು ನಾಲ್ಕು ಕೈಗಳನ್ನು ಹೊಂದಿರುವ ಶಿವನು, ತನ್ನ ಎಡದ ತೊಡೆಯಲ್ಲಿ ಪಾರ್ವತಿಯನ್ನು ಕುಳ್ಳಿರಿಸಿ ತನ್ನ ಪರಿವಾರದೊಂದಿಗೆ ಸುಖಾಸೀನನಾಗಿ ಕುಳಿತಂತೆ ಈ ಚಿತ್ರವನ್ನು ರಚಿಸಲಾಗಿದೆ. ಶಂಕರನ ಪಾದತಲದಲ್ಲಿ, ಮಾನವ ದೇಹ, ವೃಷಭ ತಲೆಯನ್ನು ಹೊಂದಿದ ನಂದಿಯು ಶಂಕರನ ಬಲದ ಪಾದಕ್ಕೆ ತನ್ನ ಕೈಗಳನ್ನು ಆಸರೆಯಾಗಿ ನೀಡಿರುತ್ತಾನೆ. ಹಿನ್ನೆಲೆಯಲ್ಲಿ ದೇವಾದಿದೇವತೆಗಳು, ಋಷಿಮುನಿಗಳನ್ನು ಕಾಣಬಹುದು. ಇಕ್ಕೆಲಗಳಲ್ಲಿ ಗಣೇಶ ಮತ್ತು ಷಣ್ಮುಖರಿದ್ದು, ಈ ಒಟ್ಟು ಕ್ರಿಯೆಯು ಒಂದು ಸುಂದರವಾದ, ಸುಸಜ್ಜಿತವಾದ ಮಂಟಪದಲ್ಲಿ ನಡೆದಂತೆ ನಿರೂಪಿಸಲಾಗಿದೆ. ಈ ಕ್ಯಾಲೆಂಡರ್‌ಗೆ ಅತೀವ ಬೇಡಿಕೆಯಿತ್ತೆಂದೂ, ಮುದ್ರಿತ ಕ್ಯಾಲೆಂಡರ್‌ಗಳೆಲ್ಲಾ ಮಾರಾಟವಾದುವೆಂದೂ, ಸ್ವಲ್ಪ ಬದಲಾವಣೆಯೊಂದಿಗೆ ಇದೇ ಮಾದರಿಯ ಇನ್ನೊಂದು ಕಲಾಕೃತಿಯನ್ನು ರಚಿಸಿಕೊಡಬೇಕೆಂಬ ಮಹಾರಾಜಾ ಫ್ರೇಮ್ ವರ್ಕ್ಸ್‌ರವರ ಬೇಡಿಕೆಯ ಮೇರೆಗೆ ಕೈಲಾಸ ಶಂಕರನ ಎರಡನೇ ಆವೃತ್ತಿಯನ್ನು ಸ್ವಾಮಿಗಳು ರಚಿಸಿಕೊಟ್ಟರೆಂದು ತಿಳಿದುಬರುತ್ತದೆ. 1932ರಲ್ಲಿ ರಚಿಸಿದ ಈ ಕಲಾಕೃತಿಯಲ್ಲಿ ಶಂಕರನ ಮುಡಿಯಲ್ಲಿನ ಗಂಗೆ ಮಾಯವಾಗಿದ್ದಾಳೆ. ಮೊದಲನೇ ಆವೃತ್ತಿಯಲ್ಲಿ ತನ್ನ ಬಲದ ಕೈಯಲ್ಲಿ ಕಮಲವನ್ನು ಹಿಡಿದಿದ್ದು, ಈ ಕೃತಿಯಲ್ಲಿ ಲಕ್ಷ್ಮಿಯು ತನ್ನ ಬಲದ ತೋಳಿನಿಂದ ಶಂಕರನ ಭುಜವನ್ನು ಬಳಸಿ ಹಿಡಿದಂತೆ ಚಿತ್ರಿಸಲಾಗಿದೆ. ಷಣ್ಮುಖನ ಆರು ತಲೆಗಳನ್ನು ರಚಿಸಿದ ರೀತಿ ಇಲ್ಲಿ ಭಿನ್ನವಾಗಿದ್ದು, ಹಿನ್ನೆಲೆಯಲ್ಲಿರುವ ದೇವದೇವತೆಯರು, ಋಷಿಪುಂಗವರಲ್ಲಿ ಬದಲಾವಣೆಗಳನ್ನು ಕಾಣಬಹುದು. ಶಂಕರನ ಬಲಗಾಲಿಗೆ ಆಸರೆಯಾಗಿ ಕೈ ಕೊಟ್ಟು ಮಂಡಿಯೂರಿ ಕುಳಿತಿದ್ದ ನಂದಿಯ ಜೊತೆ ಅತಿ ಕುಬ್ಜವೆನಿಸಬಹುದಾದ ಒಂದು ಆಕೃತಿಯಿದ್ದು, ಇದು ಭೃಂಗೀಶ್ವರನದೆಂದು ತಿಳಿದುಬರುತ್ತದೆ. ಇದೇ ರೀತಿ ಹಿನ್ನೆಲೆಯಲ್ಲೂ ಸಾಕಷ್ಟು ಬದಲಾವಣೆಗಳನ್ನು ಮಾಡಿದ್ದರೂ ಮೇಲ್ನೋಟಕ್ಕೆ ಒಟ್ಟು ಸಂಯೋಜನೆ ಮೊದಲಿನ ಕೈಲಾಸ ಶಂಕರ ಕಲಾಕೃತಿಯಂತೆಯೇ ಕಾಣುವಂತೆ ನಿರೂಪಿಸಲಾಗಿದೆ.

ಇವರು 1931ರಲ್ಲಿ ಕ್ಯಾಲೆಂಡರ್‌ಗೋಸ್ಕರ ರಚಿಸಿದ ಇನ್ನೊಂದು ಕೃತಿ ಪಂಚವಕ್ತ್ರೇಶ್ವರ. ಈ ಕಲಾಕೃತಿಯೂ ಮಹಾರಾಜಾಫ್ರೇಂ ವರ್ಕ್ಸ್‌ನವರಿಂದ ಮುದ್ರಿಸಲ್ಪಟ್ಟು ಅತೀವ ಬೇಡಿಕೆಯನ್ನು ಹೊಂದಿತ್ತು. ಇಲ್ಲಿ ರೂಪುಗೊಂಡ ಪರಮೇಶ್ವರನು ಐದು ತಲೆ ಹತ್ತು ಕೈಗಳನ್ನು ಹೊಂದಿದ್ದು, ತನ್ನ ಎಲ್ಲಾ ವೇಷಭೂಷಣಗಳೊಂದಿಗೆ ಕಮಲದ ಮೇಲೆ ಆಸೀನನಾದಂತೆ ಚಿತ್ರಿಸಲಾಗಿದೆ. ಇಲ್ಲಿನ ವಿಶೇಷವೆಂದರೆ ಈಶ್ವರನ ಮುಡಿಯ ಮೇಲಿನ ಗಂಗೆಯಾಗಲೀ, ಚಂದ್ರನಾಗಲೀ ಇಲ್ಲದಿರುವುದು. ಈಶ್ವರನ ಸುತ್ತ ಮನು, ಮಯ, ಶಿಲ್ಪಿ, ವಿಶ್ವಜ್ಞ ಮುಂತಾದ ಪಂಚಾಚಾರ್ಯರೆಂದು ಊಹಿಸಬಹುದಾದ ಆಕೃತಿಗಳನ್ನು ರಚಿಸಿರುತ್ತಾರೆ. ಆಕಾಶದಲ್ಲಿ ರೆಕ್ಕೆಗಳುಳ್ಳ ಕಿನ್ನರರು ಈಶ್ವರನಿಗೆ ಹೂಮಳೆಗರೆಯುತ್ತಿರುವುದನ್ನು ಇಲ್ಲಿ ಕಾಣಬಹುದು. ಈಶ್ವರನ ಎದುರು ಪಂಚಾಚಾರ್ಯರ ಆಕೃತಿಗಳನ್ನು ರಚಿಸುವಾಗ ಒಟ್ಟು ಚಿತ್ರದ ಕೇಂದ್ರ ಬಿಂದುವಾದ ಪರಮೇಶ್ವರನ ಆಕೃತಿಗೆ ತೊಂದರೆಯಾಗದಂತೆ ಇಕ್ಕೆಲಗಳಲ್ಲಿರುವ ಆಚಾರ್ಯರನ್ನು ನಿಂತಂತೆ ಮತ್ತು ಎದುರಿನ

ಮೂರು ಆಚಾರ್ಯರ ಆಕೃತಿಗಳನ್ನು ಪರಮೇಶ್ವರನಿಗೆ ಭಕ್ತಿಭಾವದಿಂದ ಮಂಡಿಯೂರಿ ನಮಿಸುವಂತೆ ಚಿತ್ರಿಸಿ ಪರಮೇಶ್ವರನು ಆಗತಾನೇ ಪ್ರತ್ಯಕ್ಷನಾದನೇನೋ ಎನ್ನುವಂತೆ ಒಟ್ಟು ಚಿತ್ರವನ್ನು ನಿರೂಪಿಸಿದ ರೀತಿ ಸ್ವಾಮಿಯವರ ಕಲಾ ಪ್ರೌಢಿಮೆಗೆ ಒಂದು ನಿದರ್ಶನದಂತಿದೆ. ಸ್ವಾಮಿಗಳು ರಚಿಸಿದ ಹಲವು ಕಲಾಕೃತಿಗಳನ್ನು ಸಂಯೋಜನೆಯ ದೃಷ್ಟಿಯಿಂದ ಅವಲೋಕಿಸಿದಾಗ ಇವರ ಹೆಚ್ಚಿನ ಕಲಾಕೃತಿಗಳು, ಹಿನ್ನೆಲೆಯಲ್ಲಿ ಪರದೆ, ಕಂಬ, ಪೀಠ ಮುಂತಾದ ಜಡವಸ್ತುಗಳಿಂದ ನಿರ್ಮಿತವಾದ ಒಂದು ಸನ್ನಿವೇಶದಲ್ಲಿ, ಒಟ್ಟು ಚಿತ್ರದ ಕೇಂದ್ರ ಬಿಂದುವಾದ ಪ್ರಮುಖ ದೇವ ದೇವತೆಯರನ್ನು ಚಿತ್ರ ಪಾತಾಳಿಯ ಮಧ್ಯಭಾಗದಲ್ಲಿರಿಸಿ, ಇದಕ್ಕೆ ಹಿನ್ನೆಲೆ ಮುನ್ನಲೆಯನ್ನು ರಚಿಸುತ್ತಾ, ಉಳಿದವುಗಳೆಲ್ಲಾ ಅವುಗಳಿಗೆ ಪೂರಕವಾಗುವಂತೆ ರೂಪಿಸಿ ಒಟ್ಟು ಚಿತ್ರ ಸಂಯೋಜನೆಯು ಒಂದು ತಟಸ್ಥವಾದ ಸನ್ನಿವೇಶ, ಸಂಯೋಜನೆಯಂತೆ ಕಾಣಬರುತ್ತದೆ. ಪಂಚವಕ್ತ್ರೇಶ್ವರ ಕಲಾಕೃತಿಯ ಒಟ್ಟು ಸಂಯೋಜನೆ ಇವುಗಳೆಲ್ಲವುಗಳಿಗಿಂತ ಭಿನ್ನವಾಗಿದ್ದು, ಇಲ್ಲಿ ಹಿನ್ನೆಲೆಯಲ್ಲಿ ಒಂದು ತರಹದ ಶೂನ್ಯ ವಾತಾವರಣವಿದ್ದಂತೆ ರಚಿಸಿ ಚಿತ್ರಪಾತಾಳಿಯ ಮಧ್ಯದಲ್ಲಿ ಚಿತ್ರದ ಕೇಂದ್ರಬಿಂದುವಾದ ಪಂಚವಕ್ತ್ರೇಶ್ವರನ ಆಕೃತಿಯನ್ನು ನಿರ್ಮಿಸಿ ಅದರ ಸುತ್ತಲೂ ಪಂಚಾಚಾರ್ಯರು ಮತ್ತು ಆಕಾಶದಲ್ಲಿ ಕಿನ್ನರರನ್ನು ನಿರ್ಮಿಸಿರುವುದರಿಂದ ಕೇಂದ್ರಬಿಂದುವಿನ ಸುತ್ತಲಿನ ಈ ಆಕೃತಿಗಳು ಆಕಾಶದಲ್ಲಿ ತೇಲುತ್ತಾ ಕೇಂದ್ರಬಿಂದುವಿನ ಸುತ್ತ ಸುತ್ತುತ್ತಿರುವಂತಹ ಒಂದು ಭ್ರಮಾಲೋಕವನ್ನು ಸೃಷ್ಟಿಸುತ್ತದೆ. ಇವುಗಳೆಲ್ಲವುಗಳು ಆಗತಾನೇ ಶೂನ್ಯದಲ್ಲಿ ರೂಪತಳೆದಂತೆ ಒಟ್ಟು ಚಿತ್ರವನ್ನು ನಿರೂಪಿಸಿದ ರೀತಿ ಅದ್ಭುತವಾಗಿ ಮೂಡಿಬಂದಿದೆ. ಇವರು ಕ್ಯಾಲೆಂಡರ್‌ಗೋಸ್ಕರ ರಚಿಸಿದ ಇನ್ನೊಂದು ಕೃತಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಲಿಂಗಾವತಾರ. ಈ ಚಿತ್ರದಲ್ಲಿ ರೇಣುಕಾಚಾರ್ಯರು ಲಿಂಗದಿಂದ ಉದ್ಭವವಾದಂತೆ ರಚಿಸಲಾಗಿದೆ. ಹಿನ್ನೆಲೆಯಲ್ಲಿ ತುಂಬಾ ಕುಸುರಿ ಕೆಲಸಗಳಿಂದ ಶೃಂಗಾರಗೊಂಡ ಮಂಟಪದ ರೀತಿಯ ರಚನೆಯನ್ನು ರಚಿಸಿರುತ್ತಾರೆ. ರೇಣುಕಾಚಾರ್ಯರನ್ನು ಕಿರೀಟಧಾರಿಗಳಾಗಿ, ಸರ್ವಾಂಗವೂ ವಿಭೂತಿಯಿಂದ, ವಿವಿಧ ಆಭರಣಗಳಿಂದ ಶೋಭಿತರಾದಂತೆ ಚಿತ್ರಿಸಿರುವುದನ್ನು ಇಲ್ಲಿ ಕಾಣಬಹುದು.

ಇವರು 1935ರಲ್ಲಿ ರಚಿಸಿದ "ಭಿಕ್ಷಾಟನಾಮೂರ್ತಿ" ಕೃತಿಯನ್ನು ಇವರು ರಚಿಸಿದ ಹಲವು ದೇವ ದೇವತೆಯರ ಕಲಾಕೃತಿಗಳಿಗೆ ಹೋಲಿಸಿ ನೋಡಿದಾಗ ಈ ಕಲಾಕೃತಿಯು ಭಿನ್ನ ನೆಲೆಯಲ್ಲಿ ರಚಿತವಾದಂತೆ ಕಾಣುತ್ತದೆ. ಇಲ್ಲಿ ಭಿಕ್ಷಾಟನಾಮೂರ್ತಿಯು ನಾಲ್ಕು ತೋಳುಗಳನ್ನು ಹೊಂದಿದ್ದು, ಎಡದ ಒಂದು ಕೈಯಲ್ಲಿ ತ್ರಿಶೂಲವನ್ನು, ಇನ್ನೊಂದು ಕೈಯಲ್ಲಿ ಭಿಕ್ಷಾಪಾತ್ರೆಯನ್ನು ಹಾಗೆಯೇ ಬಲದ ಒಂದು ಕೈಯಲ್ಲಿ ಡಮರುಗವನ್ನು ಹೊಂದಿದ್ದರೆ ಇನ್ನೊಂದು ಕೈಯಿಂದ ಹರಿಣಿಯೊಂದನ್ನು ಮುದ್ದಿಸುತ್ತಿರುವ ದೃಶ್ಯವನ್ನು ಕಾಣಬಹುದು. ಸಾಮಾನ್ಯವಾಗಿ ಮೈತುಂಬಾ ವಿಭೂತಿ, ರುದ್ರಾಕ್ಷಿ ಮಾಲೆಗಳೊಂದಿಗೆ ಹುಲಿಚರ್ಮವನ್ನು ತೊಟ್ಟಿರುವ ಶಿವನಿಗೆ ಬದಲಾಗಿ, ಈ ಚಿತ್ರದಲ್ಲಿ ವಿವಸ್ತ್ರನಾಗಿರುವ ಶಿವನು ಮೈತುಂಬಾ ಆಭರಣಗಳನ್ನು ಹೊಂದಿದ್ದು, ಕಂಠಾಭರಣದಂತೆ ಕತ್ತನ್ನು ಸುತ್ತಿಕೊಂಡಿರುವ ಹಾವು ಸೊಂಟವನ್ನು ಬಳಸಿರುತ್ತದೆ. ಮುಡಿಯ ಮೇಲಿನ ಚಂದ್ರ, ಕೈಗಳಲ್ಲಿರುವ ಡಮರುಗ, ತ್ರಿಶೂಲ. ಭಿಕ್ಷಾಪಾತ್ರೆ, ಸೊಂಟದ ಮೇಲಿನ

ಹಾವು ಇದು ಶಿವನ ಚಿತ್ರವೇ ಆಗಿರಬೇಕೆಂಬುದನ್ನು ಖಾತ್ರಿಪಡಿಸಿದರೂ, ತಲೆಯ ಮೇಲಿನ ಕಿರೀಟದಿಂದ ಪಾದದಲ್ಲಿರುವ ಕಡಗದವರೆಗೆ ಮೈತುಂಬಾ ಆಭರಣಗಳನ್ನು ತೊಟ್ಟು ತ್ರಿಭಂಗಿಯಲ್ಲಿ ನಿಂತಿರುವ ಮುಗ್ಧಮುಖದ ಈ ಚಿತ್ರವನ್ನು ಕಂಡಾಗ ಒಂದುಕ್ಷಣ ಇದು ಭಿಕ್ಷಾಟನಾಮೂರ್ತಿ ಶಿವನು ಹೌದೋ ಅಲ್ಲವೋ ಎಂಬ ಅನುಮಾನ ಮೂಡುತ್ತದೆ. ಸ್ವಾಮಿಯವರು ರಚಿಸಿದ ದೇವದೇವತೆಯರ ಇತರೇ ಹಲವು ಚಿತ್ರಗಳನ್ನು ಈ ಚಿತ್ರದ ಜೊತೆ ತುಲನಾತ್ಮಕವಾಗಿ ನೋಡಿದಾಗ ಸ್ವಾಮಿಯವರು ಈ ಚಿತ್ರದಲ್ಲಿ ಭಿಕ್ಷಾಟನಾಮೂರ್ತಿಯ ಅಂಗಸೌಷ್ಠವದ ರಚನಾ ವಿಧಾನದಲ್ಲಿ ಆಗ ಹೆಚ್ಚಿನ ಕಲಾವಿದರು ಬಳಸುತ್ತಿದ್ದ ಸ್ವಲ್ಪಮಟ್ಟಿಗೆ ನೈಜ ಶೈಲಿಯಲ್ಲಿ ರಚಿಸಿರುವುದನ್ನು, ಮುಖ್ಯವಾಗಿ ಮೊಣಕಾಲು, ತೋಳು ಎದೆಯ ಭಾಗ ಮುಂತಾದವುಗಳಲ್ಲಿ ಕಾಣಬಹುದು. ಭಿಕ್ಷಾಟನಾಮೂರ್ತಿಯ ಬಳಿಯಲ್ಲಿರುವ ಹರಿಣಿ, ಹಿನ್ನೆಲೆಯಲ್ಲಿನ ಭೂ ದೃಶ್ಯ, ಆಕಾಶದಲ್ಲಿ ಸೂರ್ಯಕಿರಣಗಳಿಂದ ನಿರ್ಮಾಣಗೊಂಡ ಬಣ್ಣ ಬಣ್ಣದ ಮೋಡಗಳು, ಇವುಗಳೆಲ್ಲ ಒಟ್ಟು ಕೃತಿಗೆ ಒಂದು ತರಹದ ಶೃಂಗಾರ ರಸದ ಅಭಿವ್ಯಕ್ತಿಯನ್ನು ಕೊಡುತ್ತದೆ.

"ಪಾರ್ವತಿ ಪರಮೇಶ್ವರ" ಇವರು 1935ರಲ್ಲಿ ರಚಿಸಿದ ಇನ್ನೊಂದು ಕೃತಿ. ಈ ಕೃತಿಯಲ್ಲಿ ಈಶ್ವರನು ನಾಲ್ಕು ಭುಜಗಳನ್ನು ಹೊಂದಿದ್ದು, ಎಡದ ಒಂದು ಕೈಯಲ್ಲಿ ಡಮರುಗ ಹಿಡಿದಿದ್ದರೆ, ಇನ್ನೊಂದು ಕೈಯಿಂದ ಪಾರ್ವತಿಯನ್ನು ಅಪ್ಪಿ ಹಿಡಿದಂತೆ ಚಿತ್ರಿಸಲಾಗಿದೆ. ಹಾಗೆಯೇ ಬಲದ ಒಂದು ಕೈಯಲ್ಲಿ ತ್ರಿಶೂಲವನ್ನು ಹಿಡಿದಿದ್ದರೆ ಇನ್ನೊಂದು ಅಭಯ ಹಸ್ತವನ್ನು ಹೊಂದಿದೆ. ಶಿವನು ಕಚ್ಚೆ ಪಂಚೆಯನ್ನು ಉಟ್ಟಿದ್ದು ಅದರ ಮೇಲೆ ಹುಲಿಚರ್ಮವನ್ನು ಹೊದೆದಂತೆ ಚಿತ್ರಿಸಲಾಗಿದೆ. ಪಕ್ಕದಲ್ಲಿರುವ ಪಾರ್ವತಿಯು ಶಿವನನ್ನು ಬಳಸಿ ಹಿಡಿದಂತಿದೆ. ಹಿನ್ನೆಲೆಯಲ್ಲಿ ದೇವಸ್ಥಾನದ ಕಂಬಗಳನ್ನು ಹೋಲುವ ಆಕೃತಿಗಳನ್ನು ನೆರಳು ಬೆಳಕಿನ ಛಾಯೆಗಳಲ್ಲಿ ನಿರ್ಮಿಸಿ ಇವುಗಳು ಮುಖ್ಯ ಆಕೃತಿಗೆ ತೊಂದರೆಯಾಗದಂತೆ ಒಟ್ಟುಚಿತ್ರವನ್ನು ನಿರೂಪಿಸಲಾಗಿದೆ. ಇವರು ತೈಲವರ್ಣದಲ್ಲಿ ರಚಿಸಿದ ಇನ್ನೊಂದು ಕೃತಿ ಅಶೋಕವನದಲ್ಲಿ ಸೀತಾಂಜನೇಯ. ಈ ಎರಡೂ ಕೃತಿಗಳು ಸಾಮಾನ್ಯ ಮಟ್ಟದ್ದಾಗಿದ್ದು, ಸ್ವಾಮಿಗಳ ಇತರ ಕಲಾಕೃತಿಗಳೊಂದಿಗೆ ಇದನ್ನು ಹೋಲಿಸಿ ನೋಡಿದಾಗ, ಇವುಗಳು ಸ್ವಾಮಿಗಳ ಮೇಲ್ವಿಚಾರಣೆಯಲ್ಲಿ ಅವರ ಶಿಷ್ಯರು ರಚಿಸಿದ್ದಿರಬಹುದೆಂಬ ಶಂಖೆ ಮೂಡುತ್ತದೆ.

1949ರಲ್ಲಿ ರಚಿಸಿದ ಏಕಮುಖ ಬ್ರಹ್ಮ ಮತ್ತು ತ್ರಿಮುಖ ಬ್ರಹ್ಮ ಕೃತಿಗಳು ಲಭ್ಯವಿದೆ. ಏಕಮುಖ ಬ್ರಹ್ಮನ ಚಿತ್ರದಲ್ಲಿ ಹಸನ್ಮುಖನಾದ ಅರೆತೆರೆದ ಕಣ್ಣುಗಳಿದ್ದು, ಕಂಠಾಭರಣಗಳೊಂದಿಗೆ ಸರ್ಪವು ಶಿವನ ಕಂಠವನ್ನು ಸುತ್ತಿದಂತೆ ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ಯಾವುದೇ ಗುರುತಿಸಬಹುದಾದ ಆಕೃತಿಗಳಿಲ್ಲದಂತೆ ಚಿತ್ರಿಸಿದ್ದು, ಈಶ್ವರನ ಮುಖದ ಮೇಲೆ ಬಿದ್ದ ಬೆಳಕು ಎದೆ ಮತ್ತು ಭುಜಗಳ ಮೇಲೆ ಹರಡಿ ಒಟ್ಟು ಚಿತ್ರದಲ್ಲಿ ಒಂದು ತರಹದ ನಾಟಕೀಯತೆಯನ್ನು ಸೃಷ್ಟಿಸಿರುವುದು ಈ ಕೃತಿಯಲ್ಲಿ ಕಂಡುಬರುತ್ತದೆ. ತಲೆಯ ಮೇಲಿನ ಕಿರೀಟ, ಕತ್ತಿನ ಆಭರಣಗಳಲ್ಲಿ ನಾಜೂಕಾದ ರಚನೆಯನ್ನು ತೋರಿಸುವುದರೊಂದಿಗೆ ಇದರ ಮೇಲಿನ ಬೆಳಕಿನ ಚೆಲ್ಲಾಟವನ್ನು ತೋರಿಸುವ ಪ್ರಯತ್ನವನ್ನು ಮಾಡಿರುತ್ತಾರೆ. ತ್ರಿಮುಖ ಪರಮೇಶ್ವರನ ಒಟ್ಟು ರಚನಾ ವಿಧಾನವು ಇದೇ ರೀತಿಯದಾಗಿದ್ದು, ಇಲ್ಲಿ ತ್ರಿಮುಖ ಪರಮೇಶ್ವರನು ತೆರೆದ ಕಣ್ಣುಗಳುಳ್ಳ

ಮೂರುಮುಖಗಳನ್ನು ಹೊಂದಿರುತ್ತಾನೆ. ಏಕಮುಖ ಪರಮೇಶ್ವರನ ಚಿತ್ರದಲ್ಲಿ ಕಂಠಾಭರಣವಾಗಿದ್ದ ಹಾವು ಇಲ್ಲಿ ಯಜ್ಞೋಪವೀತದಂತೆ ಎಡಭುಜದಿಂದ ಕೆಳಕ್ಕೆ, ಬಲಕ್ಕೆ ಇಳಿದು ಸೊಂಟದ ತನಕ ಇಳಿಬಿಟ್ಟಂತಿದೆ. ಈ ಎರಡೂ ಚಿತ್ರಗಳಲ್ಲಿ ಯಾವುದೋ ಒಂದು ದೈವಿಕ ಬೆಳಕು ಈಶ್ವರನ ಮುಖದ ಮೇಲೆ ಬಿದ್ದು ಸುತ್ತ ಹರಡಿದಂತೆ ರಚಿಸಲಾಗಿದೆ.

ಶಿಲ್ಪಾದರ್ಶ ಮೂರ್ತಿ ಮತ್ತು ಜಗದ್ಗುರು ನಾಗಲಿಂಗಸ್ವಾಮಿಗಳೆರಡು ಸಿದ್ಧಲಿಂಗಸ್ವಾಮಿಗಳು ರಚಿಸಿದ ಜಲವರ್ಣದ ಅತೀ ನಾಜೂಕಿನ, ಸುಂದರವಾಗಿ ಮೂಡಿಬಂದ ಕೃತಿಗಳು. ಸಿದ್ಧಲಿಂಗಸ್ವಾಮಿಗಳು ತೈಲವರ್ಣಗಳಲ್ಲಿ ಕಲಾಕೃತಿಗಳನ್ನು ರಚಿಸುವಷ್ಟೇ ಸಮರ್ಥವಾಗಿ ಜಲವರ್ಣದಲ್ಲಿ ಮತ್ತು ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲೂ ಕಲಾಕೃತಿಗಳನ್ನು ರಚಿಸಬಲ್ಲರೆಂಬುದಕ್ಕೆ ಇವು ಉತ್ತಮ ಉದಾಹರಣೆಯಾಗಬಲ್ಲುದು. ಲಿಂಗಪೂಜಾನಿರತ ನಾಗಲಿಂಗಸ್ವಾಮಿಯು ಕುಳಿತ ಪೀಠ ಮತ್ತು ಪ್ರಭಾವಳಿಗಳಲ್ಲಿ ಚಿನ್ನದ ರೇಖೆಗಳನ್ನು ಬಳಸಿರುವುದನ್ನು ಗಮನಿಸಬಹುದು. ಈ ಎರಡೂ ಚಿತ್ರಗಳಲ್ಲಿ ಸಿದ್ಧಲಿಂಗಸ್ವಾಮಿಗಳು ಜಲವರ್ಣವನ್ನು ಬಳಸಿದ ರೀತಿ, ನಾಗಲಿಂಗಸ್ವಾಮಿಗಳ ಚಿತ್ರದಲ್ಲಿನ ಕೇಶವಿನ್ಯಾಸ, ಹಸ್ತಮುದ್ರಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಲಾವಿದನಿಗಿರುವ ರೇಖೆ ಮತ್ತು ಜಲವರ್ಣದ ಮೇಲಿನ ಆಸಕ್ತಿ ಮತ್ತು ಹಿಡಿತವನ್ನು ಕಾಣಬಹುದು. ಜಗದ್ಗುರು ಶಿಲ್ಪಾದರ್ಶಮೂರ್ತಿ ಎಂಬ ಬರಹವನ್ನು ಹೊಂದಿರುವ ಕಿರುಚಿತ್ರದಲ್ಲಿ ಪರಮೇಶ್ವರನು ಐದು ಮುಖ ಮತ್ತು ಹತ್ತು ಬಾಹುಗಳನ್ನು ಹೊಂದಿದ್ದು, ಕಮಲದ ಮೇಲೆ ಯೋಗ ಮುದ್ರೆಯಲ್ಲಿ ಕುಳಿತಂತೆ ನಿರೂಪಿಸಲಾಗಿದೆ.

ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ರಚಿಸಿದ ಈ ಮೇಲಿನ ಎಲ್ಲಾ ಕೃತಿಗಳನ್ನು ಕೂಲಂಕುಷವಾಗಿ ವಿಮರ್ಶಾತ್ಮಕವಾಗಿ ಪರಾಂಭರಿಸಿ, ಅವರು ಮೈಸೂರಿನ ದರ್ಬಾರ್ ಹಾಲಿಗೋಸ್ಕರವಾಗಿಯೇ ರಚಿಸಿದ ಅಷ್ಟದುರ್ಗೆಯರ ಕಲಾಕೃತಿಗಳನ್ನು ನೋಡುವಾಗ, ದರ್ಬಾರ್ ಹಾಲಿನಲ್ಲಿರುವ ಅಷ್ಟದುರ್ಗೆಯರ ಕಲಾಕೃತಿಗಳು ಇವರ ಬದುಕಿನ ಕಾಲಾವಧಿಯಲ್ಲಿ ರಚಿಸಿದ ಅತ್ಯುತ್ಕೃಷ್ಟವಾದ ಚಿತ್ರ ಕೃತಿಗಳಾಗಿ ಕಂಡುಬರುತ್ತವೆ. ಮಾಧ್ಯಮದ ಬಳಕೆ, ಆಯ್ದ ವಿಷಯದಲ್ಲಿನ ಆಳವಾದ ಜ್ಞಾನ, ಆಗ ಪ್ರಚಲಿತವಿದ್ದ ನೈಜಕಲೆ ಮತ್ತು ಭಾರತೀಯ ಚಿತ್ರಕಲಾ ಪರಂಪರೆಯಲ್ಲಿನ ಅನುಭವಗಳ ಸಮಾಗಮ, ಸಂಯೋಜನಾ ನೈಪುಣ್ಯ, ಇವುಗಳನ್ನೆಲ್ಲಾ ಗಮನಿಸಿದಾಗ ಈ ಕೃತಿಗಳು ಕಲಾಜಗತ್ತಿಗೆ ಇವರು ನೀಡಿದ ಬಹುದೊಡ್ಡ ಕೊಡುಗೆಯಾಗಿದೆ ಎಂದು ಹೇಳುವಲ್ಲಿ ಯಾವ ಸಂದೇಹವೂ ಉಳಿಯಲಾರದು.

ಮೈಸೂರು ಅರಮನೆಯ ದರ್ಬಾರ್ ಹಾಲ್ ಪ್ರವೇಶಿಸುತ್ತಿದ್ದಂತೆ ಮೊದಲಿಗೆ ಸಿಗುವುದೇ ರವಿವರ್ಮ ರಚಿಸಿದ ರಾಮಾಯಣದ ಒಂದು ಸನ್ನಿವೇಶದ ಚಿತ್ರ, ಅದರ ಪಕ್ಕದಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳು 1946ರಲ್ಲಿ ರಚಿಸಿದ ಶ್ರೀ ಕಾಳಿಕಾದೇವಿಯ ಕಲಾಕೃತಿ, ಈ ಕಾಳಿಕಾದೇವಿಯನ್ನು ನೀಲವರ್ಣದಿಂದ ರಚಿಸಿದ್ದು ಅಷ್ಟಭುಜಗಳಿಂದ ಸರ್ವಾಂಗ ಸುಂದರಳಾಗಿ ಪೀಠದ ಮೇಲೆ ಎಡದ ಪಾದವನ್ನು ಬಲಗಾಲಿನ ತೊಡೆಯ ಮೇಲಿರಿಸಿ ಸುಖಾಸೀನಳಾಗಿ ಕುಳಿತ ಭಂಗಿಯಲ್ಲಿ ಚಿತ್ರಿಸಲಾಗಿದೆ. ಈ ಚಿತ್ರದ ಕೆಳಗೆ ಕಾಳಿಕಾದೇವಿಗೆ ಸಂಬಂದಿಸಿದಂತೆ,

ಅಷ್ಟ ಬಾಹುರ್ಮಹಾಕಾಯಾ ಕಾಲಮೇಘ ಸಮಪ್ರಭಾ ।

ಶಂಖ ಚಕ್ರ ಗದಾ ಕುಂಭ ಮುಸಲಾಂಕುಶ ಪಾಶಾಯಕ್ ।

ವಜ್ರಂಕರ ತಲೆ ಬಿಭ್ರನ್ಮಹೌ ಕಾಳೀ ಮುದೇಸ್ತುನಃ ।

ಎಂಬ ಧ್ಯಾನ ಶ್ಲೋಕವನ್ನು ಬರೆಯಲಾಗಿದೆ. ಈ ಶ್ಲೋಕವನ್ನು ಆಧಾರವಾಗಿಟ್ಟುಕೊಂಡೇ ರಚಿಸಿದ ಈ ಕೃತಿಯಲ್ಲಿ ಕಾಳಿಕಾದೇವಿಯ ಎಂಟು ಕೈಗಳೂ ಶ್ಲೋಕದಲ್ಲಿ ಹೇಳಿರುವಂತೆ ಶಂಖ, ಚಕ್ರದಿಂದೊಡಗೂಡಿದ ಶಸ್ತ್ರಾಯುಧಗಳನ್ನು ಹೊಂದಿದ್ದು ಯುದ್ಧ ಸನ್ನದ್ಧಳಾದಂತೆ ಚಿತ್ರಿತವಾಗಿದೆ. ಆದರೆ ಮುಖಮುದ್ರೆ ಮತ್ತು ಸುಖಾಸೀನಳಾಗಿ ಕುಳಿತ ಭಂಗಿಯಲ್ಲಿ ಯಾವುದೇ ಅವಸರವಾಗಲೀ, ಭೀಕರತೆಯಾಗಲೀ ಕಾಣದೆ ಶಾಂತ ಚಿತ್ತಳಾಗಿ ಕುಳಿತಂತೆ ಚಿತ್ರಿಸಲಾಗಿದ್ದು ಪೂಜಾರ್ಥಿಯ ಮನಃ ಕದಡದಂತೆ ಎಚ್ಚರವಹಿಸಲಾಗಿದೆ. ಕಾಳಿಕಾದೇವಿಯ ಕುಳಿತ ಪದ್ಮಪೀಠದ ಹಿಂದೆ ಪ್ರಭಾವಳಿಯಿದ್ದು ಈ ಪ್ರಭಾವಳಿಯ ಮೇಲೆ ಛತ್ರವಿರುವಂತೆ ನಿರ್ಮಿಸಲಾಗಿದೆ. ಈ ಒಟ್ಟು ಕಲಾಕೃತಿಯ ಬಹುಮುಖ್ಯ ಭಾಗವಾದ ಪದ್ಮಪೀಠಾರೂಢಳಾದ ಕಾಳಿಕಾದೇವಿಯನ್ನು ಒಟ್ಟು ಚಿತ್ರಫಲಕದ ಮಧ್ಯಭಾಗದಲ್ಲಿರುವಂತೆ ಸಂಯೋಜಿಸಿ ಹಿನ್ನೆಲೆಯಲ್ಲಿ ಇಕ್ಕೆಲಗಳಲ್ಲಿ ದೇಗುಲಗಳಲ್ಲಿ ಕಂಡುಬರುವ ಕಂಬಗಳನ್ನು ಚಿತ್ರಿಸಲಾಗಿದ್ದು. ಈ ಕಂಬಗಳ ತುದಿಯು ಮಕರ ಲಾಂಛನಗಳಿಂದ ಅಲಂಕೃತಗೊಂಡಿವೆ. ಚಿತ್ರಫಲಕದಲ್ಲಿ ರಚಿತಗೊಂಡ ಬೇರೆ ಬೇರೆ ಆಕಾರ ಆಕೃತಿಗಳನ್ನು ಕಲಾವಿದ ತನ್ನ ಅಭಿವ್ಯಕ್ತಿಗೆ ಪೂರಕವಾಗುವಂತೆ ದುಡಿಸಿಕೊಂಡ ರೀತಿ ಅದ್ಭುತವಾಗಿದೆ. ಒಟ್ಟು ಚಿತ್ರಸಂಯೋಜನೆಯ ಮುಖ್ಯ ಅಂಗವಾದ ಕಾಳಿಕಾದೇವಿ, ದೇವಿಯ ಉಡುಗೆ, ತೊಡಿಗೆಗಳನ್ನು ಕಲಾವಿದ ನಿರೂಪಿಸಿದ ರೀತಿಗೂ ಬಹಳ ಅಂತರವಿದೆ, ಜಡ ವಸ್ತುಗಳಾದ ಲೋಹ ನಿರ್ಮಿತ ಪೀಠ, ಶಿಲೆಯಿಂದ ನಿರ್ಮಿತಗೊಂಡ ಕಂಬಗಳ ಮೈವಳಿಕೆ ಮತ್ತು ಕಾಳಿಕಾದೇವಿಯ ದೇಹದ ಮೈವಳಿಕೆಗಳನ್ನು ಗಮನಿಸಿದಾಗ ಕಲಾವಿದನು ತೈಲಮಾಧ್ಯಮವನ್ನು ತನ್ನ ಅಭಿವ್ಯಕ್ತಿಗೆ ಪೂರಕವಾಗುವಂತೆ ಬಳಸಿರುವುದು ಕಂಡುಬರುತ್ತದೆ. ಮುನ್ನೆಲೆಯಲ್ಲಿರುವ ಕಾಳಿಕದೇವಿಯ ಆಕೃತಿ ಪ್ರಭೆಯಿಂದೊಡಗೂಡಿ ಹೆಚ್ಚಿನ ಪ್ರಾಧಾನ್ಯತೆ ಸಿಗುವಂತೆ ಚಿತ್ರಿಸಿ ಹಿನ್ನೆಲೆಯಲ್ಲಿರುವ ಪ್ರಭಾವಳಿ ಮತ್ತು ಕಂಬಗಳು ನೆರಳಲ್ಲಿರುವಂತೆ ಚಿತ್ರಿಸಿ ಇವುಗಳಾವುವೂ ಧ್ಯಾನಾಸಕ್ತನ ಏಕಾಗ್ರತೆಗೆ ಅಡಚಣೆಯಾಗದಂತೆ, ಆದರೆ ಒಟ್ಟು ಚಿತ್ರ ಸಂಯೋಜನಗೆ ಕುಂದಾಗದಂತೆ, ಅವಶ್ಯವಿದ್ದಂತೆ ಒಟ್ಟಾರೆ ಚಿತ್ರವನ್ನು ಸಂಯೋಜಿಸಲಾಗಿದೆ. ಈ ಒಟ್ಟು ಕಲಾಕೃತಿಯನ್ನು ಗಮನಿಸಿದಾಗ ಕಲಾವಿದನಿಗಿದ್ದ ಮಾಧ್ಯಮದ ಮೇಲಿನ ಹಿಡಿತ, ಸಂಯೋಜನಾ ಪರಿಣತಿ, ದೃಕ್‌ಗ್ರಹಿಕೆಯ ಜ್ಞಾನ, ಚಿತ್ರ ಕೌಶಲ್ಯ, ವೇದ, ಪುರಾಣಗಳ ಅಧ್ಯಯನ, ಸಂಸ್ಕೃತಜ್ಞಾನಗಳೆಲ್ಲ ವೇದ್ಯವಾಗುತ್ತದೆ.

ಈ ಚಿತ್ರ ಸಮುಚ್ಛಯದಲ್ಲಿನ ಹೆಚ್ಚಿನ ಚಿತ್ರಗಳು ಪೀಠಾರೂಢರಾದಂತೆ ಚಿತ್ರಿಸಿದ್ದು ಸರಸ್ವತಿ ಮತ್ತು ಲಕ್ಷ್ಮಿಯ (1942) ಎರಡು ಕೃತಿಗಳು ನಿಂತ ಭಂಗಿಯಲ್ಲಿವೆ. ಸರಸ್ವತಿಯ ಚಿತ್ರಕ್ಕೆ ಸಂಭಂದಿಸಿದಂತೆ.

ಶುದ್ಧ ಸ್ಫಟಿಕ ಸಂಕಾಶಾಂ ಮುಕ್ತಾಭರಣ ಭೂಷಿತಾಂ ।
ಚತುರ್ಬಾಹುಂ ದ್ವಿನೇತ್ರಾಂ ಚಕರಂಡ ಮುಕುಟೋಜ್ವಲಾಂ ।
ಆದರ್ಶಂ ದಕ್ಷಿಣೆ ಹಸ್ತೆ ಪುಸ್ತಕಂ ವಾಮಹಸ್ತಕೆ ।
ದಕ್ಷಿಣೇ ಪರಹಸ್ತೇತು ಚಾಕ್ಷಮಾಲಾ ವಿಧಾರಿಣೀಂ ।
ಕುಂಡಿಕಾಂ ವಾಮಹಸ್ತೇ ಚ ಧಾರಯಂತೀಂ ಸರಸ್ವತೀಂ ।

ಎಂಬ ಧ್ಯಾನ ಶ್ಲೋಕವಿರುತ್ತದೆ. ಈ ಸರಸ್ವತಿಯು ನಾಲ್ಕು ಕೈಗಳನ್ನು ಹೊಂದಿದ್ದು, ಈ ನಾಲ್ಕು ಕೈಗಳಲ್ಲಿ ಧ್ಯಾನ ಶ್ಲೋಕದಲ್ಲಿ ವಿವರಿಸಿರುವಂತೆ ಪುಸ್ತಕ, ದರ್ಪಣ, ರುದ್ರಾಕ್ಷಿಮಾಲೆ ಮತ್ತು ಕಮಂಡಲವನ್ನು ಹಿಡಿದಿದ್ದು, ದೇವಸ್ಥಾನದ ಹಿನ್ನೆಲೆಯಲ್ಲಿ ಮೆಟ್ಟಿಲಿನ ಮೇಲೆ ತ್ರಿಭಂಗಿಯಲ್ಲಿ ನಿಂತಂತೆ ನಿರೂಪಿಸಲಾಗಿದೆ. ಶ್ವೇತಾಂಭರಿಯಾಗಿ, ಮುಕುಟ, ಹಾರ, ಸೊಂಟಪಟ್ಟಿ ಮುಂತಾದ ಆಭರಣಗಳಿಂದ ಅಲಂಕೃತಳಾಗಿ ಸರ್ವಾಂಗ ಸುಂದರಳಾಗಿ ನಿಂತ ಭಂಗಿಯಲ್ಲಿರುವ ಈ ಕಲಾಕೃತಿಯು ದರ್ಬಾರ್ ಹಾಲ್‌ನಲ್ಲಿರುವ ಎಲ್ಲಾ ಕಲಾಕೃತಿಗಳಲ್ಲಿ ಶ್ರೇಷ್ಠವಾದುದಾಗಿದೆ. ಮುನ್ನೆಲೆಯಲ್ಲಿರುವ ಸರಸ್ವತಿಯ ಹಿನ್ನೆಲೆಯನ್ನು ರಚಿಸುವಾಗ ಅದರಲ್ಲಿನ ಎಲ್ಲಾ ವಿವರಗಳನ್ನು ದಾಖಲಿಸಿದರೂ ಅವುಗಳೆಲ್ಲಾ ನೆರಳಲ್ಲಿರುವಂತೆ ರಚಿಸಿ ಪ್ರಧಾನ ಚಿತ್ರಕ್ಕೆ ಏನೂ ಧಕ್ಕೆಯಾಗದಂತೆ ಎಚ್ಚರವಹಿಸಿರುತ್ತಾರೆ. ಸರಸ್ವತಿ ಉಟ್ಟಿರುವ ಸೀರೆ ಬಿಳಿ ಬಣ್ಣದ್ದಾಗಿದ್ದು ಬಿಳಿ ಬಣ್ಣದ ವಿವಿಧ ಛಾಯೆಗಳನ್ನು ಬಳಸಿ ಲಯಬದ್ಧವಾಗಿ ನೆರಿಗೆಗಳನ್ನು ರಚಿಸಿ ಈ ಮೂಲಕ ಸರಸ್ವತಿಯು ಉಟ್ಟ ಸೀರೆ ಸರಸ್ವತಿಯ ಒಟ್ಟು ದೇಹವನ್ನು ಅಪ್ಪಿ ಹಿಡಿದಂತೆ ಚಿತ್ರಿಸುತ್ತಾ, ಒಟ್ಟಾರೆ ಸರಸ್ವತಿಯ ಆಕೃತಿಯು ಮನಮೋಹಕವಾಗಿ ಕಾಣುವಂತೆ ರೂಪಿಸಲಾಗಿದೆ. ಶ್ರೀ ಸಿದ್ಧಲಿಂಗಸ್ವಾಮಿಯವರ ಶಿಲ್ಪ ಮತ್ತು ಚಿತ್ರಗಳನ್ನು ಒಟ್ಟಾಗಿ ಗಮನಿಸಿದಾಗ ಅವರ ಶಿಲ್ಪ ಮತ್ತು ಚಿತ್ರಗಳಲ್ಲಿನ ಮುಖ ಕಾಂತಿ ಮತ್ತು ಹಸ್ತಮುದ್ರೆಗಳಲ್ಲಿ ಸ್ವಾಮಿಗಳನ್ನು ಕಾಣಬಹುದು. ಈ ಸರಸ್ವತಿಯ ಚಿತ್ರವನ್ನು ತುಂಬಾ ತೀಕ್ಷಣವಾಗಿ ಗಮನಿಸಿದರೆ ಸರಸ್ವತಿಯ ಮುಖಲಕ್ಷಣ, ಕೇಶವಿನ್ಯಾಸ, ಕಣ್ಣು ಮತ್ತು ತುಟಿಗಳಲ್ಲಿನ ಪ್ರಶಾಂತತೆ ಒಟ್ಟು ಮುಖವನ್ನು ತುಂಬಾ ಸೂಕ್ಷ್ಮವಾದ ನೆರಳು ಬೆಳಕಿನ ಛಾಯೆಯಿಂದ ನಿರೂಪಿಸಿದ ರೀತಿ, ಅದೇ ತರಹ ವಿವಿಧ ಹಸ್ತಮುದ್ರಿಕೆಗಳು, ಈ ಹಸ್ತಗಳಲ್ಲಿ ನೀಳವಾದ ಬೆರಳುಗಳಿದ್ದು, ಬೆರಳುಗಳ ವಿನ್ಯಾಸ ಮತ್ತು ಲಾಲಿತ್ಯ, ಇವುಗಳು ಸ್ವಾಮಿಯವರ ಕಲಾನೈಪುಣ್ಯಕ್ಕೆ ಸಾಕ್ಷಿಯಾಗಿವೆ. ಸರಸ್ವತಿ ಮತ್ತು ಲಕ್ಷ್ಮಿಯ ಎರಡೂ ಚಿತ್ರಗಳು ಅತಿಯೆನಿಸುವಷ್ಟು ನೀಳಕಾಯವಾಗಿದ್ದಂತೆ ತೋರಿದರೂ ಒಟ್ಟು ಚಿತ್ರ ಸಂಯೋಜನೆಯಲ್ಲಿ ಇದು ಸಹ್ಯವೆಂದೆನಿಸುತ್ತದೆ.

ಮೇಲಿನ ಕಲಾಕೃತಿಗಳಲ್ಲಿ ಒಂದು ಸೀಮಿತ ಚಿತ್ರಸಂದರ್ಭದಲ್ಲಿ ಚಿತ್ರದ ಪ್ರಧಾನ ಅಂಗವಾದ ದೇವಿ ದೇವತೆಯರ ಆಕೃತಿಗಳನ್ನು ಸಂಯೋಜಿಸಿರುವುದನ್ನು ಕಂಡರೆ, ಇದೇ ದರ್ಬಾರ್ ಹಾಲ್‌ನಲ್ಲಿರುವ ಶ್ರೀ ಗಾಯತ್ರಿ (1942) ಮತ್ತು ಮಹಿಷಾಸುರಮರ್ದಿನಿಯ (1943) ಚಿತ್ರ ಸಂಯೋಜನೆ ಇವುಗಳಿಗಿಂತ ಭಿನ್ನವಾಗಿರುವುದನ್ನು ಕಾಣಬಹುದು. ಇಲ್ಲಿನ ದೇವಿ ದೇವತೆಯರನ್ನು ಕೂಡಾ ಇತರೇ ಕಲಾಕೃತಿಗಳಲ್ಲಿ ರಚಿಸಿದ ದೇವಿ ದೇವತೆಯರನ್ನು ರಚಿಸಿದಂತೆಯೇ ಧ್ಯಾನಶ್ಲೋಕವನ್ನು ಆಧಾರವಾಗಿಟ್ಟುಕೊಂಡೇ ರಚಿಸಲಾಗಿದೆ. ಆದರೆ ಇವುಗಳ ಹಿನ್ನೆಲೆ ಭಿನ್ನವಾಗಿದೆ. ಮಹಿಷಾಸುರಮರ್ಧಿನಿಯಲ್ಲಿ ದೇವಿಯು ಅಷ್ಟಭುಜಗಳುಳ್ಳವಳಾಗಿ,

ಏಳು ಬಾಹುಗಳಲ್ಲಿ ವಿವಿಧ ಆಯುಧಗಳನ್ನು ಹೊಂದಿದ್ದು, ಒಂದು ಕೈಯಲ್ಲಿ ಯಾವುದೇ ಆಯುಧವಿಲ್ಲದೆ, ಎಚ್ಚರಿಕೆಯ ಮುದ್ರೆಯಂತೆನಿಸುವ ಹಸ್ತಮುದ್ರೆಯೊಂದಿಗೆ ತನ್ನ ವಾಹನವಾದ ಸಿಂಹಕ್ಕೆ ಒರಗಿಕೊಂಡು ಮಹಿಷನ ಮೇಲೆ ನಿಂತಂತೆ ನಿರೂಪಿಸಲಾಗಿದೆ. ಒರಗಿ ನಿಂತಿರುವ ಸಿಂಹವು ತನ್ನ ಎಡಮುಂಗಾಲನ್ನು ಎತ್ತಿ ನಿಂತ ಭಂಗಿಯಲ್ಲಿದೆ. ದೇವಿಯ ಕಾಲ್ತುಳಿತದಲ್ಲಿ ಸಿಕ್ಕಿರುವ ಮಹಿಷಾಸುರನು ಕೈಯಲ್ಲಿ ಖಠಾರಿಯನ್ನು ಹಿಡಿದಿದ್ದು, ದೇವಿಯ ಪಾದದಡಿಯಿಂದ ತಪ್ಪಿಸಿಕೊಳ್ಳಲು ಕೊಸರಾಡುವಂತೆ ಚಿತ್ರಿತವಾಗಿದೆ. ಈ ಘಟನೆಯು ಒಂದು ವಿಶಾಲವಾದ ಬಯಲಲ್ಲಿ ನಡೆಯುತ್ತಿದ್ದಂತೆ ಈ ಒಟ್ಟು ಚಿತ್ರವನ್ನು ನಿರೂಪಿಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಬೆಟ್ಟ ಗುಡ್ಡ, ಮರ ಗಿಡ, ಹೂಬಳ್ಳಿಗಳನ್ನು ರಚಿಸುತ್ತಾ ದಿಗಂತದ ಕಲ್ಪನೆಯನ್ನು ಕೊಡಲಾಗಿದೆ, ದೇವಿಯು ಒರಗಿ ನಿಂತಿರುವ ಸಿಂಹದ ಮೈವಳಿಕೆಯನ್ನು ಗಮನಿಸಿದಾಗ ನೈಜ ಕಲೆಯ ಬಗ್ಗೆ ರಚನಾ ವಿಧಾನದ ಬಗ್ಗೆ ಬಳಸುವ ಮಾಧ್ಯಮದ ಸಾಧ್ಯತೆಗಳ ಬಗ್ಗೆ, ಸ್ವಾಮಿಯವರಿಗಿರುವ ಅಪಾರ ಜ್ಞಾನದ ಅರಿವಾಗುತ್ತದೆ, ಸಿಂಹದ ಕೇಶರಾಶಿ, ಸ್ನಾಯುಗಳ ಕಲ್ಪನೆಗಳೊಂದಿಗೆ ಅಂಗವಿನ್ಯಾಸ, ಸಿಂಹದ ಮೈ ಮೇಲಿನ ಬೆಳಕಿನ ಚೆಲ್ಲಾಟ ಮುಂತಾದ ಅತಿ ಸೂಕ್ಷ್ಮ ವಿಷಯಗಳಲ್ಲೂ ಸ್ವಾಮಿಯವರು ತೋರಿದ ಕಲಾ ಪ್ರೌಢಿಮೆಯನ್ನು ಕಾಣಬಹುದಾಗಿದೆ. ಹಿನ್ನೆಲೆಯಲ್ಲಿ ರಚಿಸಿದ ಮರಗಿಡಗಳು, ಬೆಟ್ಟಗುಡ್ಡಗಳು, ಅಲ್ಲಲ್ಲಿ ಅರಳಿ ನಿಂತಿರುವ ಹೂ ಬಳ್ಳಿಗಳು, ಅವುಗಳ ಮೇಲೆ ನೆರಳು ಬೆಳಕಿನ ವಿನ್ಯಾಸ, ಒಂದು ವಿಶಿಷ್ಟ ಪರಿಸರವನ್ನು ನಿರ್ಮಿಸುತ್ತದೆ.

ಹೆಚ್ಚು ಕಮ್ಮಿ ಇದೇ ಮಾದರಿಯಲ್ಲಿ ನಿರೂಪಿಸಿದ ಇನ್ನೊಂದು ಚಿತ್ರ ಶ್ರೀ ಗಾಯತ್ರಿ . ಈ ಚಿತ್ರದಲ್ಲಿನ ಕೇಂದ್ರಬಿಂದುವಾದ ಗಾಯತ್ರಿಯು ಪಂಚಮುಖ ಮತ್ತು ದಶಭುಜಗಳನ್ನು ಹೊಂದಿದ್ದು, ಹತ್ತು ಕೈಗಳಲ್ಲಿ ಅಭಯ ಮತ್ತು ವರದ ಹಸ್ತಗಳೊಂದಿಗೆ ಶಂಖ, ಚಕ್ರ, ಗದಾ, ಪದ್ಮ, ಪಾಶ, ಅಂಕುಶ, ಕಮಲ ಮುಂತಾದ ಅಲಂಕಾರಗಳೊಂದಿಗೆ ಕಮಲದ ಮೇಲೆ ಸುಖಾಸೀನಳಾಗಿ ಕುಳಿತಂತೆ ( ತೇಲುತ್ತಿರುವಂತೆ) ಚಿತ್ರಿಸಲಾಗಿದೆ, ದೇವಿಯ ಮುನ್ನೆಲೆಯಲ್ಲಿ ಹಂಸಗಳಿದ್ದು, ಮೇಲೆ ಆಕಾಶದಲ್ಲಿ ಲಕ್ಷ್ಮಿ, ಪಾರ್ವತಿ, ಸರಸ್ವತಿಯರು ತಮ್ಮ ವಾಹನಗಳೊಂದಿಗಿರುವಂತೆ ಸಂಯೋಜಿಸಲಾಗಿದೆ, ದೇವಿ ಆಸೀನಳಾಗಿರುವ ಕೊಳ ಮತ್ತು ಆಕಾಶ ದಿಗಂತದಲ್ಲಿ ಒಂದನ್ನೊಂದು ಸೇರುವಂತೆ ಚಿತ್ರಿಸಿ, ಚಿತ್ರದ ಹಿನ್ನೆಲೆಯಲ್ಲಿ ಒಂದು ಭ್ರಮಾ ಲೋಕವನ್ನು ಸೃಷ್ಟಿಸಲಾಗಿದೆ, ಆಕಾಶದಲ್ಲಿ ತುಂಬಾ ಅಲಂಕಾರಿಕವಾಗಿ ರಚಿಸಿದ ಮೋಡಗಳು ಆಕಾಶದಲ್ಲಿ ಚಿತ್ರಿತವಾಗಿರುವ ಲಕ್ಷ್ಮಿ, ಸರಸ್ವತಿ, ಪಾರ್ವತಿಯರು ತಮ್ಮ ವಾಹನಗಳೊಂದಿಗೆ ಆಕಾಶದಿಂದ ತೇಲಿಬರುವಂತೆ ಕಾಣಲು ಪೂರಕವಾಗಿ ಸಂಯೋಜಿಸಿರುವುದು ಸ್ವಾಮಿಗಳ ಚಿತ್ರ ಸಂಯೋಜನಾ ಜಾಣ್ಮೆಯನ್ನು ತೋರಿಸುತ್ತದೆ, ಮಹಿಷಾಸುರಮರ್ಧಿನಿ ಮತ್ತು ಗಾಯತ್ರಿ ಈ ಎರಡೂ ಚಿತ್ರಗಳು ಚಿತ್ರ ಸಂಯೋಜನೆಯ ದೃಷ್ಟಿಯಿಂದ ದರ್ಬಾರ್ ಹೋಲಿನಲ್ಲಿರುವ ಇತರೇ ಚಿತ್ರಗಳಿಗಿಂತ ಸ್ವಲ್ಪ ಭಿನ್ನ ರೀತಿಯ ಸಂಯೋಜನೆಯನ್ನು ಹೊಂದಿದ್ದು, ಇಲ್ಲಿ ಸ್ವಾಮಿಯವರು ಬಳಸಿದ ಬಣ್ಣಗಳು ಅವುಗಳನ್ನು ಬಳಸಿದ ರೀತಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ಸ್ವಾಮಿಯವರಿಗೆ ಭಾರತೀಯ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ಇದ್ದಷ್ಟೇ ಪರಿಣತಿ ಬ್ರಿಟೀಷ್ ಮಾದರಿಯ ಚಿತ್ರ ಪ್ರಕಾರದಲ್ಲೂ ಇದ್ದಿತೆಂಬುದು

ಖಚಿತವಾಗುತ್ತದೆ. ಚಿತ್ರದ ಪ್ರಧಾನ ಅಂಗವಾದ ದೇವಿಯ ಆಕೃತಿಯನ್ನು ಹೊರತುಪಡಿಸಿ ಇತರೇ ಎಲ್ಲಾ ಭಾಗಗಳು ಆಗ ಪ್ರಚಲಿತವಿದ್ದ ನೈಜಶೈಲಿಗೆ ಹತ್ತಿರವಾದಂತೆ ಚಿತ್ರಿತವಾಗಿದ್ದು, ದೇವಿಯ ಚಿತ್ರ ಮಾತ್ರ ಭಿನ್ನವಾಗಿರುವುದನ್ನು ಇಲ್ಲಿ ಕಾಣಬಹುದು.

ದರ್ಬಾರ್ ಹಾಲಿನಲ್ಲಿರುವ ಚಿತ್ರ ಸರಣಿಯ ಕೊನೆಯ ಶ್ರೀ ರಾಜರಾಜೇಶ್ವರಿ ಚಿತ್ರವನ್ನು ವಿಮರ್ಶಾತ್ಮಕವಾಗಿ ನೋಡುವಾಗ, ಸ್ವಾಮಿಯವರು ರಚಿಸಿದ ಇತರೇ ದೇವಿಯರ ಚಿತ್ರ ಸಂಯೋಜನೆಗೂ ಈ ಚಿತ್ರದ ಸಂಯೋಜನೆಗೂ ತುಂಬಾ ಅಂತರ ಕಾಣುತ್ತದೆ. ಈ ಚಿತ್ರ ಪಾತಾಳಿಯು ಹಲವು ರೂಪಗಳು, ಆಕಾರ ಆಕೃತಿಗಳಿಂದ ತುಂಬಿದ್ದು, ಒಟ್ಟು ಚಿತ್ರ ಸಂಯೋಜನೆಯ ಅತಿ ಮುಖ್ಯ ಭಾಗವಾಗಬೇಕಾಗಿದ್ದ ರಾಜರಾಜೇಶ್ವರಿ ಅಂಕುಶ ಹಿಡಿದ ಬಲದ ಕೈಯ ಮೇಲೆ ಕಲಾವಿದ ಛಾಯೆಯನ್ನು ತೋರಿಸಲು  ಪ್ರಯತ್ನಿಸಿದ್ದು, ಹಾಗೇನೇ ರಾಜರಾಜೇಶ್ವರಿಯ ಹಿಂದೆ ಶಯನ ಮುದ್ರೆಯಲ್ಲಿರುವ ಶಿವನ ದೇಹದ ಮೇಲೆ ಇದೇ ತರಹದ ಪ್ರಯತ್ನವನ್ನು ಮಾಡಿದ್ದು, ಇಂತಹ ಪ್ರಯತ್ನಗಳು ಒಂದೇ ತೆರನಾಗಿ ಎಲ್ಲಾ ಕಡೆಗಳಲ್ಲೂ ಹಮ್ಮಿಕೊಂಡಿರದಿರುವುದು, ಮಾತ್ರವಲ್ಲ ನಾವು ಸ್ವಾಮಿಗಳ ಇತರ ಕಲಾಕೃತಿಗಳಲ್ಲಿ ಗಮನಿಸಿದಂತೆ ದೇವಿದೇವತೆಯರ ಮುಖಲಕ್ಷಣ, ಹಸ್ತಮುದ್ರೆಯಲ್ಲಿನ ಬೆರಳುಗಳಲ್ಲಿರುವ ಲಾಲಿತ್ಯ ಈ ಚಿತ್ರ ಸಂಯೋಜನೆಯಲ್ಲಿ ಕಾಣದಾಗಿರುವುದನ್ನು ಕಂಡಾಗ ಒಬ್ಬನಿಗಿಂತ ಹೆಚ್ಚು ಕಲಾವಿದರು ಈ ಕಲಾಕೃತಿಯ ರಚನೆಯ ಸಂದರ್ಭದಲ್ಲಿ ಕೈಯಾಡಿಸಿರಬಹುದೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಮತ್ತು ಈ ನಿರ್ಧಾರಕ್ಕೆ ಬರಲು ಕಾರಣಗಳೂ ಇವೆ. ಅಂದಿನ ದಿನಗಳಲ್ಲಿ ಚಿತ್ರಕಲಾ ರಚನೆಯಲ್ಲಿ ತಮ್ಮ ಶಿಷ್ಯಂದಿರನ್ನು ಬಳಸುವುದು ಸಾಮಾನ್ಯವಾಗಿತ್ತೆಂಬುದು ಹಲವು ಹಿರಿಯ ಕಲಾವಿದರಿಂದ ತಿಳಿದುಬರುತ್ತದೆ. ವಿದ್ಯಾರ್ಥಿ ದೆಸೆಯಲ್ಲಿ ಅರಮನೆಯ ಹಿರಿಯ ಕಲಾವಿದರುಗಳ ಜೊತೆ ಕೆಲಸ ಮಾಡುತ್ತಾ ಅವರಿಂದ ಹಲವು ವಿಚಾರಗಳನ್ನು ತಂತ್ರಗಾರಿಕೆಯನ್ನು ಕಲಿತುಕೊಂಡ ತಮ್ಮ ಅನುಭವಗಳನ್ನು ಇಂದೂ ಮೈಸೂರಿನ ಕೆಲವು ಹಿರಿಯ ಕಲಾವಿದರು ನಮ್ಮ ಜೊತೆ ತುಂಬಾ ಭಾವುಕರಾಗಿ ಹಂಚಿಕೊಳ್ಳುತ್ತಾರೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಶ್ರೀ ರಾಜರಾಜೇಶ್ವರಿ ಚಿತ್ರವನ್ನು ನೋಡುವುದು ಸೂಕ್ತ. ಇವುಗಳೆಲ್ಲವನ್ನೂ ಹೊರತುಪಡಿಸಿಯೂ ಸ್ವಾಮಿಗಳ ಮೇಲ್ವಿಚಾರಣೆಯಲ್ಲಿ ನುರಿತ ಕಲಾವಿದರಿಂದ ರಚಿತವಾದ ಈ ಕಲಾಕೃತಿಯಲ್ಲಿ ಕಲಾವಿದರು ತೋರಿದ ಕುಸುರಿಕೆಲಸದಲ್ಲಿನ ಇವರ ನೈಪುಣ್ಯ ನೋಡುಗನನ್ನು ಆಕರ್ಷಿಸುವಲ್ಲಿ ಸಾಫಲ್ಯವನ್ನು ಕಂಡಿದೆ.

ಸ್ವಾಮಿಯವರು ರಚಿಸಿದ ದರ್ಬಾರ್ ಹಾಲಿನಲ್ಲಿರುವ ಎಲ್ಲಾ ಕೃತಿಗಳನ್ನು ಒಟ್ಟಾರೆಯಾಗಿ ಗಮನಿಸಿದಾಗ ಕಲಾವಿದನ ಧೋರಣೆ ನಿಚ್ಚಳವಾಗಿ ವ್ಯಕ್ತವಾಗುತ್ತದೆ. ಶಿಲ್ಪಿ ಶ್ರೀಸಿದ್ಧಲಿಂಗಸ್ವಾಮಿಯವರು ಗ್ರಾಹಕನಿಗೆ ಬೇಕಾದ ಚಿತ್ರ, ಶಿಲ್ಪ ಸಾಮಾಗ್ರಿಗಳನ್ನು ಒದಗಿಸುವ ಒಬ್ಬ ಕುಶಲಕರ್ಮಿಯಲ್ಲ. ಇವರೊಬ್ಬ ಶಿಲ್ಪಿ, ಚಿತ್ರಗಾರ, ವಾಸ್ತು ಶಾಸ್ತ್ರ ಪರಿಣಿತ, ಋಷಿ, ಆಚಾರ್ಯ, ವೇದ ಪುರಾಣ ಪಾರಂಗತ, ಬಹುಭಾಷಾ ಪ್ರವೀಣ, ಪೂರ್ಣ ಪ್ರಮಾಣದ ಸ್ಥಪತಿ, ಇವರಿಗೆ ಯಾವುದೇ ಚಿತ್ರ ಮಾಧ್ಯಮವಾಗಲೀ, ತಂತ್ರವಾಗಲೀ, ಇದಕ್ಕೆ ಸಂಬಂಧಿಸಿದ ಯಾವುದೇ ಜ್ಞಾನವಾಗಲೀ ಹೆಚ್ಚು ದಿನ ಹೊಸತಾಗಿ, ಕಠಿಣವಾಗಿ ಉಳಿಯಲು ಸಾಧ್ಯವಿಲ್ಲ.

ಯಾವುದೇ ತಂತ್ರ, ಮಾಧ್ಯಮವನ್ನು ತನ್ನದಾಗಿಸುವ ಮತ್ತು ಅದನ್ನು ತನಗೆ ಬೇಕಾದಂತೆ ದುಡಿಸಿಕೊಳ್ಳುವ ಸಾಮರ್ಥ್ಯವನ್ನು ಇವರು ಹೊಂದಿದ್ದರು ಎನ್ನುವುದಕ್ಕೆ ಇವರ ಕಲಾಕೃತಿಗಳೇ ಸಾಕ್ಷಿ. ಪೋಷಕರ, ಗ್ರಾಹಕರ ದೃಕ್ ಸಂವೇದನೆಗಳನ್ನೇ ಪಲ್ಲಟ ಗೊಳಿಸಬಲ್ಲ ಜಾಣ್ಮೆ ಮತ್ತು ವಿಶ್ವಾಸ ಇವರಲ್ಲಿತ್ತೆಂಬುದಕ್ಕೆ ದರ್ಬಾರ್ ಹಾಲಿನಲ್ಲಿ ಸ್ಥಾಪಿಸಲ್ಪಟ್ಟಿದ್ದ ರವಿವರ್ಮನ ಕಲಾಕೃತಿಗಳಜಾಗವನ್ನು ಇವರ ಕಲಾಕೃತಿಗಳು ಪಡೆದದ್ದೇ ಒಂದು ಉತ್ತಮ ಉದಾಹರಣೆಯಾಗಬಲ್ಲದು. ಇದೇ ಒಬ್ಬ ಶ್ರೇಷ್ಠ ಮಟ್ಟದ ಕಲಾವಿದನಿಗೂ ಸಾಮಾನ್ಯನಿಗೂ ಇರುವ ಮೂಲ ವ್ಯತ್ಯಾಸ. ಇವರು ಎಷ್ಟು ಗಂಭೀರವಾದ ಕಲಾವಿದರೋ ಅಷ್ಟೇ ಗಂಭೀರವಾದ ವಿದ್ವಾಂಸರೂ ಹೌದು ಎಂಬುದು ಅಷ್ಟೇ ಮುಖ್ಯ. ಇವರು, ನಾವು ಈ ಲೌಕಿಕ ಜಗತ್ತಿನಲ್ಲಿ ಬದುಕುತ್ತಿದ್ದರೂ, ನಮ್ಮನ್ನು ಲೌಖಿಕದಿಂದ ಅಲೌಖಿಕದೆಡೆಗೆ ಕೊಂಡೊಯ್ಯಬಲ್ಲ ಒಂದು ಶಕ್ತಿಯಿದೆಯೆಂದು ನಂಬಿದವರು. ಲೌಖಿಕದಿಂದ ಅಲೌಖಿಕದೆಡೆಗೊಯ್ಯಬಲ್ಲ ಶಕ್ತಿಯನ್ನು ದೇವಿಯ ಆರಾಧನೆಯಲ್ಲಿ ಕಂಡುಕೊಳ್ಳಲು ಪ್ರಯತ್ನಿಸಿದವರು. ತನ್ನ ಈ ನಿಲುವಿನಲ್ಲಿ ಎಂದೂ ರಾಜಿ ಮಾಡಿಕೊಳ್ಳಲು ಒಪ್ಪದವರು. ಕಲಾವಿದರ ಈ ನಿಲುವುಗಳನ್ನು ಅವರ ದೇವಿ ದೇವತೆಯರ ಕಲಾಕೃತಿಗಳಲ್ಲಿ ನಿಚ್ಚಳವಾಗಿ ಕಾಣಬಹುದು. ಈ ಚಿತ್ರಗಳಲ್ಲಿ ದೇವಿ ದೇವತೆಯರನ್ನು ಹೊರತುಪಡಿಸಿ, ಹಿನ್ನೆಲೆ ಮುನ್ನೆಲೆಗಳಲ್ಲಿರುವ ಲೋಹ ನಿರ್ಮಿತ ಪೀಠಗಳು, ಹಿನ್ನೆಲೆಯಲ್ಲಿರುವ ಶಿಲಾಕಂಬಗಳು, ಬೆಟ್ಟಗುಡ್ಡಗಳು, ಹೂಬಳ್ಳಿಗಳು, ಪ್ರಾಣಿಪಕ್ಷಿಗಳು ಇವೆಲ್ಲವನ್ನೂ ನೈಜಶೈಲಿಗೆ (ಲೌಖಿಕ) ಹತ್ತಿರವಾದಂತೆ, ನೆರಳು ಬೆಳಕಿನ ವಿನ್ಯಾಸದೊಂದಿಗೆ ರಚಿಸಿದ್ದರೂ ದೇವಿ ದೇವತೆಯರ ಆಕೃತಿಗಳನ್ನು ಬೇರೆಯೇ ಆದ ರೀತಿಯಲ್ಲಿ ನಿರ್ಮಿಸಿರುವುದನ್ನು ಕಾಣಬಹುದು. ಸ್ವಾಮಿಯವರಿಗೆ ದೇವಿ ದೇವತೆಯರು ಅಲೌಖಿಕರು, ಮನೋದೃಕ್‌ಗೋಚರರು, ಇವರನ್ನು ಸ್ವಾಮಿಯವರು ಅತಿಮಾನುಷರಂತೆ ಉದ್ದೇಶ ಪೂರ್ವಕವಾಗಿಯೇ ರಚಿಸಿರುತ್ತಾರಲ್ಲದೆ, ಅವರಿಗೆ ನೈಜ ಶೈಲಿಯ ಬಗ್ಗೆ ಜ್ಞಾನವಿರಲಿಲ್ಲವೆಂದಾಗಲೀ ಅಥವಾ ಆ ತರಹದ ಚಿತ್ರ ರಚನಾ ತಂತ್ರಗಾರಿಕೆಯಲ್ಲಿ ಪಳಗಿಲ್ಲವೆಂದಾಗಲೀ ಹೇಳಿದರೆ ನಾವು ಸ್ವಾಮಿಗಳಿಗೆ, ಅವರ ಚಿತ್ರ ಪಾಂಡಿತ್ಯಕ್ಕೆ ಅಪಚಾರವೆಸಗಿದಂತಾಗಬಹುದು.

ಸಿದ್ಧಲಿಂಗಸ್ವಾಮಿಯವರ ಕಲಾಸೇವೆ ಕೇವಲ ಅರಮನೆಗೆ ಸೀಮಿತವಾಗಿರಲಿಲ್ಲ. ಇವರು ಶಾಸ್ತ್ರೋಕ್ತವಾಗಿ ರಚಿಸಿದ ದೇವಾನುದೇವತೆಗಳ ಶಿಲ್ಪ ಚಿತ್ರಗಳಿಗೆ ಭಾರತದಾದ್ಯಂತ ಬೇಡಿಕೆಗಳಿದ್ದವು. ಶಿಲ್ಪ ಮತ್ತು ವಾಸ್ತು ಶಾಸ್ತ್ರದ ಸವಿಸ್ತಾರವಾದ ವಿವರಣೆಗಳಿರುವ ಮಹಾಗ್ರಂಥವೇ ಮಾನಸಾರ. ಇದನ್ನು ಆಂಗ್ಲಭಾಷೆಗೆ ರೂಪಾಂತರಿಸುವ ಮಹತ್ಕಾರ್ಯವನ್ನು ಅಲಹಾಬಾದ್ ವಿಶ್ವವಿದ್ಯಾನಿಲಯದ ಸಂಸ್ಕೃತ ಪ್ರೊಫೆಸರ್ ಮತ್ತು ಪ್ರಾಚ್ಯವಸ್ತು ಸಂಶೋಧನಾಲಯದ ಮುಖ್ಯಸ್ಥರು ಆದ ಪ್ರಸನ್ನಕುಮಾರ್ ಆಚಾರ್ಯ ಹಮ್ಮಿಕೊಂಡಾಗ ಅವರು ಎದುರಿಸಿದ ಸವಾಲುಗಳು ಹಲವು. ಎಲ್ಲಾ ಸವಾಲುಗಳನ್ನು ಸಮರ್ಪಕವಾಗಿ ನಿಭಾಯಿಸುತ್ತಾ ಬಂದರೂ, ಈ ಗ್ರಂಥಕ್ಕೆಸೂಕ್ತವಾದ, ಗ್ರಂಥದಲ್ಲಿ ವಿವರಿಸಿರುವ ಶಿಲ್ಪ ಮತ್ತು ವಾಸ್ತು ಶಾಸ್ತ್ರಗಳಿಗೆ ಧಕ್ಕೆಯಾಗದ ರೀತಿಯ ಸಾಂದರ್ಭಿಕ ಚಿತ್ರಗಳದ್ದೇ ಸಮಸ್ಯೆಯಾಯಿತು. ಇದಕೋಸ್ಕರ ಭಾರತದ ಪ್ರಮುಖ ನಗರಗಳಲ್ಲೆಲಾ ಹುಡುಕಾಟ ನಡೆಸಿದ ಪ್ರಸನ್ನ ಅವರಿಗೆ ಆ ಸಂದರ್ಭದಲ್ಲಿ ಮೈಸೂರಿನ

ಪ್ರಾಚ್ಯವಸ್ತು ಸಂಶೋಧನಾಲಯದ ನಿರ್ದೇಶಕರಾದ ಎಂ.ಎಚ್.ಕೃಷ್ಣ ಅವರ ಮುಖಾಂತರ ಶ್ರೀ ಸಿದ್ಧಲಿಂಗಸ್ವಾಮಿಯವರ ಪರಿಚಯವಾಯಿತು. ಈ ಗ್ರಂಥಕ್ಕೆ ಬೇಕಾದ ಹಲವಾರು ಸಾಂದರ್ಭಿಕ ಚಿತ್ರಗಳನ್ನು ರಚಿಸಿ ಕೊಡಲು ಬೇಡಿಕೆಯಿಟ್ಟರೂ ಸಿದ್ಧಲಿಂಗಸ್ವಾಮಿಯವರು ತಮ್ಮ ಹಲವು ಕೆಲಸ ಕಾರ್ಯಗಳ ಒತ್ತಡದಿಂದಾಗಿ ಸುಮಾರು 22 ಚಿತ್ರಗಳನ್ನು ಮಾತ್ರ ರಚಿಸಿಕೊಟ್ಟರೆಂದು ತಿಳಿದುಬರುತ್ತದೆ. ಈ ಸಾಂದರ್ಭಿಕ ಚಿತ್ರಗಳ ಬಗ್ಗೆ ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್ ಪ್ರಕಟಿತ ARCHITECUTRE OF MANASARA ಎಂಬ ಪುಸ್ತಕದ ಮುನ್ನುಡಿಯಲ್ಲಿ ಬರೆದಿರುವ ಸಾಲುಗಳೇ ಇವರ ಕಲಾನೈಪುಣ್ಯಕ್ಕೆ ಸಾಕ್ಷಿಯಾಗಬಲ್ಲದು. "The sculptural drawings in line and in colours could not be given the same advantage of joint deliberation, mutual consultation and final rivision. Despite the fact that there is an ever-growing class of artists all over India, most of those of local renown and teachers of recognized schools of arts in Bombay, Broda, Delhi, Lahore, Lucknow, Allahabad,Ajmer, Jaipur, Jodhpur, Culcutta, Shillong, Cuttack, Puri, Madras, and Bangalore refused, after due deliberation, to under-take the work, and the few artists who agreed on their own terms, gave up the task after trials lasting from two to three months. At last professor M.H.Krishna, M.A.D.Litt, Director of Archaeology, Mysore State, took me to several local artists and under took to select one for me. But after protracted negotiations lasting over eight months he gave up in disgust the prospect of finding a riliable person for the purpose, declaring that" our old type artists are so old-worldly in their business habits," But I am thankfull to him for having brought me in contact with Silpa siddhanti sivyogi Sri Siddalingaswamy, the head of the Jagdguru Naglingswamy Monastery, who claims to be " a silpin by heredity" to have studied shilpa, painting, etc, at the feet of guru" and to have been "training for a quarter of a centuary a number of youths in the art of sculpture, painting and kindred subjects according to sanskrit canons", He under took, after an experiment lasting for nearly a year, to supply twenty-two drawings in which another six months were spent. I believe that he has, given the best of his inherited skill, ripe experience and spiritual study of the subject to these sculptural drawings.

In the absence of expected assistance and personal supervision of Dr.Krishna, the elucidation of the details had to be carried out in lengthy, and at times, trying correspondence. I shall, however, remain grateful to Silpa Siddanti Sivyogy Sri Siddalingswamy who, among all the artists I had approached, had the courage and patience of partly illustrating to sculptural section of the encyclopaedia of hindu arts, and hopes to execute the remaining sculptural drawings, numbering some three hundred, if his present performance proves successful and if the Manasara itself recives the practical recognition it deserves" ಎಂದು ಸಿದ್ಧಲಿಂಗಸ್ವಾಮಿಗಳು ರಚಿಸಿದ ಚಿತ್ರಗಳ ಬಗ್ಗೆ ಪ್ರಸನ್ನಕುಮಾರ್‌ರವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಪುಸ್ತಕಕ್ಕೋಸ್ಕರ ಸ್ವಾಮಿಗಳು ರಚಿಸಿದ ರೇಖಾಚಿತ್ರ ಮತ್ತು ವರ್ಣಚಿತ್ರಗಳನ್ನು ಗಮನಿಸಿದರೆ ಸ್ವಾಮಿಯವರಿಗಿದ್ದ ರೇಖೆಗಳ ಮತ್ತು ಬಣ್ಣಗಳ ಮೇಲಿನ ಹಿಡಿತಗೋಚರವಾಗುತ್ತದೆ. ಮುಖ್ಯವಾಗಿ ಜಟಾ ಎಂಬ ಕಿರೀಟದ ರೇಖಾಚಿತ್ರ ಮತ್ತು ಬುದ್ಧ ಮತ್ತು ಸಾಯುಜರ ವರ್ಣಚಿತ್ರ. ಇವುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸ್ವಾಮಿಗಳ ರೇಖೆಗಳ ಮೇಲಿನ ಹಿಡಿತ, ಅವುಗಳಲ್ಲಿನ ಲಾಲಿತ್ಯ, ನೋಡುಗನಿಗೆ ಒಂದು ತರಹದ ಖುಶಿಯನ್ನು ಕೊಡುತ್ತದೆ. ಬುದ್ಧ ಮತ್ತು ಸಾಯುಜರ ಕಲಾಕೃತಿಗಳಲ್ಲಿ ಇವರು ಜಲವರ್ಣವನ್ನು ಬಳಸಿದ ರೀತಿ, ವರ್ಣವಿನ್ಯಾಸ, ಯಾವುದೇ ಒಬ್ಬ ಉತ್ತಮ ಚಿತ್ರಕಲಾವಿದನಿಗೆ ಕಡಿಮೆಯಿಲ್ಲದಂತೆ ಅತ್ಯುತ್ತಮವಾಗಿ ರಚಿಸಿರುವುದನ್ನು ಕಾಣಬಹುದು. ಬ್ರಹ್ಮ, ಸರಸ್ವತಿ ಮತ್ತು ಸಾವಿತ್ರಿ ಶಿವ ಮತ್ತು ಪಾರ್ವತಿ, ವಿಷ್ಣು, ಲಕ್ಷ್ಮಿ ಮತ್ತು ಭೂದೇವಿ ಮುಂತಾದ ಕೃತಿಗಳಲ್ಲಿ ಪ್ರಧಾನ ಆಕೃತಿಗಳ ಹಿನ್ನೆಲೆ, ಸಂಯೋಜನೆ, ಒಟ್ಟು ಚಿತ್ರ ಪಾತಾಳಿಯನ್ನು ನಿರ್ವಹಿಸಿದ ರೀತಿಯನ್ನು ಕಂಡಾಗ, ಈ ಕೃತಿಗಳು ಪ್ರಸನ್ನಕುಮಾರ್‌ರವರು ಪೀಠಿಕೆಯಲ್ಲಿ ಹೇಳಿರುವಂತೆ, ಇವುಗಳು ಶಿಲ್ಪಕ್ಕೆ ಸಂಬಂಧಪಟ್ಟಂತೆ ತಾಳ ಮಾನಗಳನ್ನು ತಿಳಿಸಲು ಬಳಸಿರುವ ಒಂದು ಸಾಂದರ್ಭಿಕ ಚಿತ್ರವೆಂದೆನಿಸದೆ, ಇವುಗಳು ಒಬ್ಬ ಉತ್ತಮ ಚಿತ್ರ ಕಲಾವಿದ ರಚಿಸಬಲ್ಲ ಸ್ವತಂತ್ರ ಕಲಾಕೃತಿಗಳಷ್ಟೇ ಶ್ರೇಷ್ಠಮಟ್ಟದ್ದಾಗಿದೆ ಎಂಬುದರಲ್ಲಿ ಯಾವ ಸಂಶಯವೂ ಉಳಿಯಲಾರದು. ಶಾಸ್ತ್ರೋಕ್ತವಾಗಿ ರಚಿಸಿದ ಈ ಕೃತಿಗಳಲ್ಲೂ ಸ್ವಾಮಿಯವರ ಸ್ವಂತಿಕೆಯ ಕಲಾನೈಪುಣ್ಯವೆಂದು ಗುರುತಿಸಬಲ್ಲ ಮಂದಹಾಸ ಬೀರುವ ಮುಖಗಳು, ನೋಡುಗನನ್ನು ತನ್ನೆಡೆಗೆ ಸೆಳೆಯಬಲ್ಲ ಆಕರ್ಷಕ ಕಣ್ಣುಗಳು, ನಿರ್ದಿಷ್ಟ ದೇವಿ ದೇವತೆಯರ ವಿವಿಧ ಹಸ್ತಮುದ್ರಿಕೆಗಳು, ಆಯುಧಗಳು, ಹಸ್ತದಲ್ಲಿನ ಬೆರಳುಗಳ ಲಾಲಿತ್ಯ ಎದ್ದು ಕಾಣುತ್ತವೆ.

### ಶ್ರೀ ಸಿದ್ಧಲಿಂಗಸ್ವಾಮಿಯವರು ಸ್ಥಪತಿ-ಶಿಲ್ಪಿಯಾಗಿ:

ಸ್ವಾಮಿಯವರು ಮೈಸೂರನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡ ಮೇಲೆ ಅವರು ತಮ್ಮ ಶಿಷ್ಯರಿಂದೊಡಗೂಡಿ ಮಾಡಿದ ಶಿಲ್ಪಗಳು ನೂರಾರು, ಕೃಷ್ಣರಾಜಸಾಗರ

ಬೃಂದಾವನದಲ್ಲಿರುವ ಕೃಷ್ಣಶಿಲೆಯ ಕಾವೇರಮ್ಮನವರ ವಿಗ್ರಹ, ಅಲ್ಲಿನ ಅಮೃತಶಿಲೆಯ ರಾಧಾಕೃಷ್ಣ ಶಿಲ್ಪ, ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದಲ್ಲಿರುವ ನವಗ್ರಹ ದೇವತಾದಿ ವಿಗ್ರಹಗಳು, ಹಾಸನ ಜಿಲ್ಲೆಯ ಆನೆಕೆರೆ ಗ್ರಾಮದ ಚೆನ್ನಕೇಶವಸ್ವಾಮಿ ವಿಗ್ರಹ, ಶಿಕಾರಿಪುರದಲ್ಲಿ ಎತ್ತರವಾದ ಸ್ತಂಭದ ಮೇಲೆ ಕಂಗೊಳಿಸುತ್ತಿರುವ ಗಂಡಭೇರುಂಡ ವಿಗ್ರಹ, ಜೋಗದಲ್ಲಿರುವ ಚಾಮುಂಡೇಶ್ವರಿ ವಿಗ್ರಹ, ದಾವಣಗೆರೆಯ ಶ್ರೀ ರಾಮಲಕ್ಷ್ಮಣಸೀತಾ ಆಂಜನೇಯ ವಿಗ್ರಹಗಳು, ಹಿಂದೂಪುರದಲ್ಲಿರುವ ಅಮೃತಶಿಲೆಯ ಕನ್ನಿಕಾಪರಮೇಶ್ವರಿ, ಶ್ರೀ ರಂಗನಾಥಸ್ವಾಮಿ ವಿಗ್ರಹಗಳು, ಚಿಕ್ಕಮಗಳೂರಿನಲ್ಲಿರುವ ವಿಘ್ನೇಶ್ವರ ವಿಗ್ರಹ, ಕುಡಲಿ ಶೃಂಗೇರಿ ಸಂಸ್ಥಾನದಲ್ಲಿರುವ ಪಂಚ ಲೋಹದ ಶಾರದಾ ವಿಗ್ರಹ, ಆಂಧ್ರದ ಗುಂಟೂರು ಜಿಲ್ಲೆಯ ಚಿದಾಲ ಎಂಬಲ್ಲಿರುವ ಕಾಮಾಕ್ಷಿ ವಿಗ್ರಹ, ಮೈಸೂರಿನ ಪರಕಾಲ ಮಠದಲ್ಲಿರುವ ಶ್ರೀಕೃಷ್ಣಬ್ರಹ್ಮತಂತ್ರ ಪರಕಾಲ ಸ್ವಾಮಿಗಳ ಶಿಲಾಮೂರ್ತಿ ಮತ್ತು ರಜತಮಯ ಹಯಗ್ರೀವ ವಿಗ್ರಹ, ಜಯಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಸ್ಥಾಪಿಸಿದ ಮೈಸೂರು ಅರಮನೆಯ ಕೋಟೆಯ ದೇವಸ್ಥಾನದಲ್ಲಿರುವ ಭುವನೇಶ್ವರಿ, ಚಾಮುಂಡೇಶ್ವರಿ, ವಿಗ್ರಹ, ಮಾತ್ರವಲ್ಲದೆ, ಜರ್ಮನಿಯ ರಡಾಲ್ಫ್ ಆಟೋ ಎಂಬವರಿಗೆ ರಚಿಸಿಕೊಟ್ಟ ಶಂಕರಾಚಾರ್ಯರ ಮರದ ವಿಗ್ರಹ, ಇವು ಸ್ಥಪತಿ ಸಿದ್ಧಲಿಂಗಸ್ವಾಮಿಗಳು ರಚಿಸಿದ ಕೆಲವು ಪ್ರಮುಖ ಶಿಲ್ಪಗಳೆಂದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದ ಕನ್ನಡ ವಿಷಯ ವಿಶ್ವಕೋಶದಲ್ಲಿರುವ ಲೇಖನದಲ್ಲಿ ದಿ॥ ಪಿ.ಆರ್. ತಿಪ್ಪೇಸ್ವಾಮಿ ಯವರು ದಾಖಲಿಸಿರುತ್ತಾರೆ.

ತಾವು ತಪವನ್ನಾಚರಿಸಿ ಸಂಕಲ್ಪ ಸಿದ್ಧಿ ಪಡೆದ, ನಿಜಗುಣಶಿವಯೋಗಿಗಳ ತಪೋಭೂಮಿ ಶಂಭುಲಿಂಗೇಶ್ವರ ಬೆಟ್ಟದಲ್ಲಿ ಇವರು ರಚಿಸಿದ ದಕ್ಷಿಣಾಮೂರ್ತಿ ಮತ್ತು ನಂದೀಕೇಶ್ವರ ಮೊತ್ತಮೊದಲ ಶಿಲಾನಿರ್ಮಿತ ಶಿಲ್ಪ ಕೃತಿಯಾಗಿರಬೇಕೆಂದೂ, ಆಲದ ಮರದಡಿಯಲ್ಲಿ ಕುಳಿತ ವೀಣಾಪಾಣಿ ದಕ್ಷಿಣಾಮೂರ್ತಿ ನಾಲ್ಕುಕೈಗಳನ್ನು ಹೊಂದಿದ್ದು, ಮುಂಗಾಲುಗಳು ಪರಸ್ಪರ ಸಂಧಿಸುವಂತೆ ಕತ್ತರಿಗಾಲಲ್ಲಿ ಕುಳಿತ ಮುದ್ರೆಯಲ್ಲಿದ್ದು ಯೋಗಪಟ್ಟವು ಮೊಳಕಾಲು ಮತ್ತು ದೇಹವನ್ನು ಬಂಧಿಸಿವೆ. ಪಾದಗಳ ಬುಡದಲ್ಲಿರುವ ಋಷಿಗಳ ವಿಗ್ರಹಗಳು ವಸಿಷ್ಠ, ಭೃಗು, ಜಮದಗ್ನಿ, ಭಾರಧ್ವಾಜ, ಶೌನಕ, ಅಗಸ್ತ್ಯರದಾಗಿರಬಹುದೆಂದು ಕಾಶ್ಯಪ ಶಿಲ್ಪಶಾಸ್ತ್ರದ ಪ್ರಕಾರ ಊಹಿಸಬಹುದೆಂದೂ ದಾಖಲೆಗಳಿಂದ ತಿಳಿದುಬರುತ್ತದೆ. ಮೈಸೂರಿಗೆ ಬಂದ ಸ್ವಾಮಿಗಳು ಮಂಡಿಮೊಹಲ್ಲಾದಲ್ಲಿರುವ ಕಾಳಿಕಾಂಬ ಕಮಟೇಶ್ವರ ದೇವಸ್ಥಾನದ ಎದುರಿಗಿದ್ದ ಒಂದು ಛತ್ರದಲ್ಲಿ ತಂಗಿದ್ದರೆಂಬುದಕ್ಕೆ ಅಲ್ಲಿ ಸಂಪೂರ್ಣವಾಗಿ ಶಿಥಿಲಗೊಂಡ ಛತ್ರದ ಸುತ್ತಮುತ್ತ ಚದುರಿರುವ ಮುರಿದ ಶಿಲ್ಪಗಳು, ಕಲ್ಲಿನ ಚೂರುಗಳು ಮೂಖ ಸಾಕ್ಷಿಗಳಾಗಿ ಈಗಲೂ ನಿಂತಿವೆ. ಈ ಛತ್ರದ ಎದುರಿಗಿರುವ ಕಾಳಿಕಾಂಬ ಕಮಟೇಶ್ವರ ದೇವಸ್ಥಾನಕ್ಕೆ ಇವರು ರಚಿಸಿಕೊಟ್ಟ ವಿಶ್ವಕರ್ಮನ ಶಿಲ್ಪವು ವಿಶಿಷ್ಟವಾದುದಾಗಿದೆ. ಈ ಶಿಲ್ಪದ ಎರಡೂ ಕಡೆಗಳಲ್ಲೂ ದೇಹ ಮತ್ತು ಮುಖವನ್ನು ಹೊಂದಿದ್ದು ಇದೊಂದು ವಿರಳ ಪೂಜಾ ವಿಗ್ರಹವೆನ್ನಬಹುದು. ಪರ್ಯಂಕಾಸನದಲ್ಲಿ ಕುಳಿತಿರುವ ಈ ಮೂರ್ತಿಯು, ಚತುರ್ಮುಖ/ಷಣ್ಮುಖ, ದಶಭುಜಗಳನ್ನೊಳಗೊಂಡ ಉನ್ನತ ಪ್ರಭಾವಳಿಯನ್ನು ಹೊಂದಿರುತ್ತದೆ. ಎರಡೂ ಕಡೆಗಳಿಂದಲೂ ನಾಲ್ಕು ಮುಖಗಳು ಕಾಣುವಂತೆ,

ನಾಲ್ಕು ದಿಕ್ಕುಗಳಲ್ಲೂ ನಾಲ್ಕು ತಲೆಗಳಿದ್ದು ಅವುಗಳ ಮೇಲೆ ಹಿಂದೆ ಮತ್ತು ಮುಂದೆ ಎರಡು ತಲೆಗಳನ್ನು ಬಹಳ ಜಾಣಕ್ಷತನದಿಂದ ಜೋಡಿಸಲಾಗಿದೆ. ಇದರಿಂದ ನೋಡುಗನು ಎದುರಿನಿಂದಲಾಗಲೀ ಹಿಂಭಾಗದಿಂದಾಗಲೀ ಈ ವಿಗ್ರಹವನ್ನು ವೀಕ್ಷಿಸಿದಾಗ ಮಧ್ಯದಲ್ಲಿ ಪೂರ್ಣಮುಖ. ಇಕ್ಕೆಲಗಳಲ್ಲಿ ಪಾರ್ಶ್ವಮುಖಗಳ ಜೊತೆಗೆ ಪೂರ್ಣಮುಖದ ಮೇಲೆ ಇನ್ನೊಂದು ಸ್ವಲ್ಪ ಚಿಕ್ಕಪ್ರಮಾಣದ ಮುಖವೂ ಕಾಣುವುದರಿಂದ ಏಕಕಾಲದಲ್ಲಿ ಚತುರ್ಮುಖದ ದರ್ಶನವಾಗುವಂತೆ ಸಂಯೋಜಿಸಲಾಗಿದೆ. ಇಂತಹ ವಿರಳ ಸಂದರ್ಭಗಳಲ್ಲೇ ಶಾಸ್ತ್ರೋಕ್ತವಾಗಿ ತಾಲಮಾನಗಳ ಪೂರ್ಣ ಜ್ಞಾನದೊಂದಿಗೆ ಒಬ್ಬ ಸ್ತಪತಿಯು ಹೇಗೆ ಕ್ರಿಯಾತ್ಮಕ ಕಲಾಕೃತಿಗಳನ್ನು ರಚಿಸಿಬಲ್ಲನೆಂಬುದಕ್ಕೆ ಮಾತ್ರವಲ್ಲ ಸ್ತಪತಿಗೆ, ತನ್ನ ಕ್ರಿಯಾಶೀಲತೆಗೆ ಯಾವುದೇ ಶಾಸ್ತ್ರಗಳು ಅಡ್ಡಿಯಾಗಲಾರದೆಂಬುದಕ್ಕೆ ಇದೊಂದು ಉತ್ತಮ ಉದಾಹರಣೆಯಾಗಬಲ್ಲದು. ಈ ಶಿಲ್ಪದ ಪಕ್ಕದಲ್ಲಿ ಪ್ರತ್ಯೇಕ ಪ್ರತ್ಯೇಕವಾದ ಐದು ಚಿಕ್ಕ ಪ್ರಮಾಣದ ಶಿಲ್ಪಗಳಿದ್ದು ಇವುಗಳು ಕಬ್ಬಿಣ, ಮರ, ಕಂಚು, ಶಿಲೆ ಮತ್ತು ಸ್ವರ್ಣದ ಕಲಾಪ್ರವರ್ತಕರಾದ ಮನು, ತ್ವಷ್ಟ, ಶಿಲ್ಪಿ, ವಿಶ್ವಜ್ಞರದಾಗಿರಬಹುದೆಂದು ಊಹಿಸಬಹುದಾಗಿದೆ. ಇದೇ ದೇವಸ್ಥಾನದ ಆವರಣದಲ್ಲಿರುವ ನವಗ್ರಹ ಮೂರ್ತಿಗಳೂ ಅಷ್ಟೇ ವಿಶಿಷ್ಟವಾಗಿದ್ದು ಈ ನವಗ್ರಹ ಮೂರ್ತಿಗಳು ತಮ್ಮ ಪತ್ನೀ ಸಮೇತರಾಗಿ ವಾಹನಾರೂಢರಾಗಿರುವಂತೆ ರಚಿಸಲಾಗಿದೆ. ರಥದ ಚಾಲಕರಾಗಿ ಒಬ್ಬೊಬ್ಬ ದೇವತೆಯರಿದ್ದು ಪ್ರತೀ ರಥದ ಚಕ್ರದ ಬಳಿಯಲ್ಲೂ ಒಂದೊಂದು ದೇವತಾ ಮೂರ್ತಿಯ ವಿಗ್ರಹವನ್ನು ರಚಿಸಲಾಗಿದೆ. ಆದರೆ ಈ ಶಿಲ್ಪಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವುಗಳಿಗೆ ಸ್ತಪತಿಗಳ ಮಾರ್ಗದರ್ಶನವಿದ್ದರೂ, ಹೆಚ್ಚಿನ ಕೆತ್ತನೆ ಕೆಲಸಗಳು ಸ್ವಾಮಿಗಳ ಶಿಷ್ಯರಿಂದ ಮಾಡಲ್ಪಟ್ಟಂತೆ ಕಂಡು ಕಲಾಕೌಶಲ್ಯದ ದೃಷ್ಟಿಯಿಂದ ಇದೊಂದು ಉತ್ತಮ ಕಲಾಕೃತಿಯೆಂದೆನಿಸದು.

ಸ್ವಾಮಿಗಳು ದೇವದೇವತೆಯರ ಶಿಲ್ಪಗಳನ್ನು ಮಾತ್ರವಲ್ಲ ಸಂತ, ಸತ್ಪುರುಷರ ಮಾನವ ಶಿಲ್ಪಕಲಾಕೃತಿಗಳನ್ನೂ ಅಷ್ಟೇ ವಸ್ತುನಿಷ್ಠವಾಗಿ ರಚಿಸಬಲ್ಲರೆಂಬುದಕ್ಕೆ ಅವರು ಪರಕಾಲ ಮಠಕ್ಕೆ ರಚಿಸಿದ ಶ್ರೀ ಕೃಷ್ಣಬ್ರಹ್ಮತಂತ್ರ ಪರಕಾಲಸ್ವಾಮಿಗಳ ಶಿಲಾಮೂರ್ತಿ ಒಂದು ಉತ್ತಮ ಉದಾಹರಣೆಯಾಗಬಹುದು. ಈ ಮಠದಲ್ಲಿ ಸುಮಾರು ಎಂಟು ಸ್ವಾಮಿಗಳ ಶಿಲ್ಪಾಕೃತಿಗಳಿದ್ದು, ಇವುಗಳಲ್ಲಿ ಹೆಚ್ಚಿನವುಗಳು ಕಾಲ್ಪನಿಕ-ಸಾಂಕೇತಿಕವಾದವುಗಳಾಗಿದ್ದು, ಶ್ರೀಕೃಷ್ಣಬ್ರಹ್ಮತಂತ್ರ ಪರಕಾಲಸ್ವಾಮಿಗಳ ಶಿಲ್ಪವು ಹೆಚ್ಚು ವಸ್ತುನಿಷ್ಠ ಕಲಾಕೃತಿಯೆಂದೆನಿಸುತ್ತದೆ. ಇದೊಂದು ಪೂರ್ಣ ಪ್ರಮಾಣದ, ಪದ್ಮಾಸನದಲ್ಲಿ ಕುಳಿತಿರುವ ಶಿಲ್ಪವಾಗಿದ್ದು ಇದರ ಸುತ್ತಲಿನ ಪ್ರಭಾವಳಿ ಮತ್ತು ಪೀಠಗಳಲ್ಲೂ ಉತ್ತಮ ವಿನ್ಯಾಸದ ರಚನೆಗಳಿವೆ. ಇದೇ ಮಠದಲ್ಲಿ ಸುಮಾರು ಒಂದು ಒಂದುವರೆ ಅಡಿ ಎತ್ತರದ ಪೂರ್ಣ ಬೆಳ್ಳಿಯಿಂದ ತಯಾರಿಸಿದ ಒಂದು ಸುಂದರವಾದ ಲಕ್ಷ್ಮಿ ಹಯಗ್ರೀವರ ವಿಗ್ರಹವಿದೆ. ಕುದುರೆ ಮುಖ ಮಾನವ ದೇಹವನ್ನು ಹೊಂದಿದ ಹಯಗ್ರೀವ ಕಿರೀಟಧಾರಿಯಾಗಿ, ಸುಖಾಸೀನನಾಗಿ ಕುಳಿತಿದ್ದು, ತನ್ನ ಎಡದ ತೊಡೆಯ ಮೇಲೆ ಲಕ್ಷ್ಮಿ ಆಸೀನಳಾಗಿದ್ದಂತೆ ನಿರೂಪಿಸಲಾಗಿದೆ. ಬಲದ ಒಂದು ಕೈಯಲ್ಲಿ ಚಕ್ರ, ಇನ್ನೊಂದು ಭಿನ್ನುದ್ರೆಯಲ್ಲಿದ್ದರೆ ಎಡದ ಒಂದು ಕೈಯಲ್ಲಿ ಶಂಖ ಮತ್ತು ಇನ್ನೊಂದು ಕೈಯಲ್ಲಿ ಪುಸ್ತಕವನ್ನು ಹಿಡಿದ ಮುದ್ರೆಯಲ್ಲಿದ್ದು, ವಸ್ತ್ರಾಭರಣಗಳೊಂದಿಗೆ ಈ ಮೂರ್ತಿಯನ್ನು ನಿರ್ಮಿಸಲಾಗಿದೆ.

ಈ ಮೂರ್ತಿಯನ್ನು ಇತರೇ ದೇವತಾಮೂರ್ತಿಗಳಿಗೆ ಹೋಲಿಸಿದಾಗ ಇದು ಕುಬ್ಜವಾಗಿದ್ದಂತೆ ಕಂಡು ಬಂದು ಬಹುಶಃ ಈ ಮೂರ್ತಿಯನ್ನು ಶಿಲ್ಪಶಾಸ್ತ್ರದನ್ವಯ ಚತುರ್ ತಾಲದಲ್ಲಿ ನಿರ್ಮಿಸಿರಬಹುದೆಂದು ಊಹಿಸಬಹುದಾಗಿದೆ. ಈ ಶಿಲ್ಪಸೌಂದರ್ಯವನ್ನು ಮೆಚ್ಚಿದ ಮಠಾಧಿಪತಿಗಳು ಸಿದ್ಧಲಿಂಗಸ್ವಾಮಿಯವರಿಗೆ ಸುವರ್ಣ ಪದಕದೊಂದಿಗೆ ಶಿಲ್ಪಕಲಾ ವಿಶಾರದ ಎಂಬ ಬಿರುದನ್ನು ಕೊಟ್ಟು ಗೌರವಿಸಿದ್ದರಂತೆ.

ಮಹಾರಾಜರವರ ಖಾಸಗಿ ಪೂಜಾಗೃಹಕ್ಕೆ ರಚಿಸಿದ ನವದುರ್ಗಾದೇವಿಯ ಸುವರ್ಣ ಮತ್ತು ನವರತ್ನಗಳಿಂದ ರಚಿಸಿದ ವಿಗ್ರಹವು ಸ್ವಾಮಿಗಳಿಗೆ ಲೋಹಶಿಲ್ಪ ಜ್ಞಾನದ ಬಗ್ಗೆ ಇರುವ ನೈಪುಣ್ಯಕ್ಕೆ ಒಂದು ಉತ್ತಮ ಉದಾಹರಣೆಯಾಗಿದೆ. ಈ ನವದುರ್ಗೆಯು ಹದಿನೆಂಟು ಕೈಗಳನ್ನು ಹೊಂದಿದ್ದು ಸಕಲಾಭರಣ ಭೂಷಿತಳಾಗಿ, ಸರ್ವಾಂಗ ಸುಂದರಳಾಗಿ ಪೀಠದ ಮೇಲೆ ಆಸೀನಳಾದಂತೆ ರಚಿಸಲಾಗಿದೆ. ಇದರ ಸುತ್ತಲೂ ಪ್ರಭಾವಳಿಯ ರಚನೆಯನ್ನೂ ಮಾಡಲಾಗಿದೆ. ಇದಕ್ಕೆ ಪೂರಕವಾಗಿ ವಿವಿಧ ದೇವತಾ ಮೂರ್ತಿಗಳನ್ನು ಶಾಸ್ತ್ರೀಯವಾಗಿ ಉಬ್ಬು ಶಿಲ್ಪ ಮಾದರಿಯಲ್ಲಿ ಬೆಳ್ಳಿ ಮತ್ತು ಬಂಗಾರದಿಂದ ರಚಿಸಿದ ಒಂದು ಮಹಾಮಂಟಪವನ್ನು ನಿರ್ಮಿಸಲಾಗಿದೆ.

ಅರಮನೆಯ ಕೋಟೆ ಆವರಣದೊಳಗಿನ ಭುವನೇಶ್ವರಿ ದೇವಾಲಯದಲ್ಲಿ ಸ್ವಾಮಿಗಳು ಮತ್ತು ಅವರ ಶಿಷ್ಯಂದಿರು ರಚಿಸಿದ ಉತ್ತಮವಾದ ವಿಗ್ರಹಗಳಿವೆ. ಪೂಜಾವಿಗ್ರಹವಾದ ಭುವನೇಶ್ವರಿಯು, ಪಾಶ, ಅಂಕುಶ, ಅಭಯ ಮತ್ತು ವರದ ಹಸ್ತಗಳನ್ನೊಳಗೊಂಡ ನಾಲ್ಕು ತೋಳುಗಳನ್ನು ಹೊಂದಿದ್ದು ಕಮಲದ ಮೇಲೆ ಆಸೀನಳಾಗಿದ್ದಾಳೆ. ನೀಳವಾದ ಕಿರೀಟವನ್ನು ಹೊಂದಿದ್ದು ಹಿಂದೆ ಪ್ರಭಾಚಕ್ರವಿದೆ. ಹಿನ್ನೆಲೆಯಲ್ಲಿರುವ ಪ್ರಭಾವಳಿಯನ್ನು ರಚಿಸಿದ್ದು ಇವುಗಳು ಬಳ್ಳಿ ಮತ್ತು ದೇವತಾಕೃತಿಗಳನ್ನು ಹೊಂದಿದ್ದು ತುಂಬಾ ಸೂಕ್ಷ್ಮ ಕೆತ್ತನೆಗಳಿಂದ ಕೂಡಿದೆ.

ಸಿದ್ಧಲಿಂಗಸ್ವಾಮಿಗಳ ಒಟ್ಟು ಕಲಾಸೃಷ್ಟಿಯನ್ನು ಗಮನಿಸಿದಾಗ, ಶ್ರೀ ಸಿದ್ಧಲಿಂಗಸ್ವಾಮಿಗಳು ಕಡೆದ ಶಿಲ್ಪಗಳು, ಬರೆದ ಚಿತ್ರಗಳು ನೂರಾರು ಅನ್ನುವುದಕ್ಕಿಂತ ಸಾವಿರಾರು ಎನ್ನುವುದೇ ಸೂಕ್ತ ಎಂದು ಶ್ರೀ ಶಿವಲಿಂಗಪ್ಪನವರು ಹೇಳಿರುವ ಮಾತು ಅತಿಶಯೋಕ್ತಿಯಾಗಲಾರದು. ಸಿದ್ಧಲಿಂಗಸ್ವಾಮಿಗಳು ರಚಿಸಿದ ಹೆಚ್ಚಿನ ಶಿಲ್ಪಗಳು ದೇವತಾವಿಗ್ರಹಗಳಾಗಿದ್ದು, ಇವುಗಳನ್ನು ವಿವರವಾಗಿ, ಸೂಕ್ಷ್ಮವಾಗಿ ಗಮನಿಸುವುದು ತುಂಬಾ ಕಠಿಣ ಕೆಲಸವಾಗಿದೆ. ಹೆಚ್ಚಿನ ಈ ವಿಗ್ರಹಗಳು ದೇವಸ್ಥಾನಗಳ ಗರ್ಭಗೃಹದೊಳಗೆ ಪ್ರತಿಷ್ಠಾಪಿಸಲ್ಪಟ್ಟಿದ್ದು ಇವುಗಳನ್ನು ಹತ್ತಿರದಿಂದ ಗಮನಿಸುವುದು ಮೊದಲನೇ ತೊಡಕಾದರೆ, ಇವುಗಳೆಲ್ಲಾ ಪಟ್ಟೆ ಪೀತಾಂಬರ, ಹೂಹಾರ, ಚಿನ್ನಾಭರಣಗಳಿಂದ ಸದಾ ಅಲಂಕೃತಗೊಂಡಿರುವುದು ಬಹು ಮುಖ್ಯ ತೊಡಕಾಗಿದೆ. ಈ ದೇವತಾಮೂರ್ತಿಗಳನ್ನು ಯಾವುದೇ ಅಲಂಕಾರಗಳಿಲ್ಲದೆ ಒಂದು ಶಿಲ್ಪದಂತೆ ಅಭ್ಯಸಿಸುವುದು ಅಸಾಧ್ಯವೇ ಸರಿ. ಆದರೆ ಯಾವುದೇ ಕಲಾವಿದನ ಕಲಾಪ್ರೌಢಿಮೆಯನ್ನು ತಿಳಿಯಲು ಆತನ ಎಲ್ಲಾ ಕಲಾಕೃತಿಗಳನ್ನು ನೋಡದೆಯೂ, ಕೆಲವು ಮುಖ್ಯ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ತಿಳಿಯಬಹುದಾಗಿದೆ. ಈ ದಿಸೆಯಲ್ಲಿ ಸಿದ್ಧಲಿಂಗಸ್ವಾಮಿಗಳ ಶಿಲ್ಪಕಲಾ ಪ್ರೌಢಿಮೆಯನ್ನು ತಿಳಿಯಲು

ಅವರು ಅವರ ಶಿಷ್ಯರಿಂದೊಡಗೂಡಿ ರಚಿಸಿದ ಮೈಸೂರಿನ ಕಾಮಕಾಮೇಶ್ವರಿ ದೇವಸ್ಥಾನ ಒಂದು ಸೂಕ್ತ ಸ್ಥಳವಾಗಿದೆ. ಇದೊಂದು ಕೇವಲ ದೇವಸ್ಥಾನವಾಗಿರದೆ ಇದೊಂದು ಶಿಲ್ಪಕಲಾ ಸಮುಚ್ಚಯವಾಗಿದೆ. ಈ ದೇವಸ್ಥಾನದ ನಿರ್ಮಾಣದ ಸಂಪೂರ್ಣ ಕಾರ್ಯವನ್ನು ಸ್ಥಪತಿ ಎನ್ನುವ ತಮ್ಮ ಸ್ಥಾನಕ್ಕೆ ಯಾವುದೇ ಕುಂದುಬರದಂತೆ ಅನ್ವರ್ಥವಾಗಿ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ರಚಿಸಿರುವುದನ್ನು ಇಲ್ಲಿ ಕಾಣಬಹುದು.

ಶ್ರೀಮಾನ್ ಮಹಾರಾಜ ಜಯಚಾಮರಾಜೇಂದ್ರ ಒಡೆಯರ್‌ರವರು ಪುತ್ರ ಸಂತಾನಾರ್ಥವಾಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರ ನೇತೃತ್ವದಲ್ಲಿ ಕಾಮಕಾಮೇಶ್ವರಿ ದೇವಿಯನ್ನು ಕುರಿತು ವಿಶೇಷ ಪೂಜೆ, ಹೋಮಾದಿಗಳನ್ನು ನೆರವೇರಿಸಿದರೆಂದೂ, ಇದರ ಫಲವಾಗಿ ಪುತ್ರ ಸಂತಾನಪ್ರಾಪ್ತವಾಯಿತೆಂದೂ ಇದೇ ಈ ಕಾಮಕಾಮೇಶ್ವರಿ ದೇವಸ್ಥಾನದ ನಿರ್ಮಾಣಕ್ಕೆ ಕಾರಣವಾಯಿತೆಂದೂ ಪ್ರತೀತಿಯಿದೆ. ಮಹಾರಾಜರ ಇಚ್ಛೆ, ಮೈಸೂರಿನಲ್ಲೊಂದು ಅತ್ಯುತ್ತಮವಾದ, ತಮ್ಮ ಕಲಾಪ್ರೌಢಿಮೆಯ ಅಭಿವ್ಯಕ್ತಿಗೆ ಯೋಗ್ಯವಾದ ಒಂದು ದೇವಸ್ಥಾನವನ್ನು ನಿರ್ಮಾಣಮಾಡಬೇಕೆಂಬ ಸಿದ್ಧಲಿಂಗಸ್ವಾಮಿಗಳ ಕನಸು ಸಾಕಾರಗೊಳ್ಳಲು ಅನುವುಮಾಡಿಕೊಟ್ಟಿತು. ಈ ಒಟ್ಟು ದೇವಸ್ಥಾನದ ನಿರ್ಮಾಣ ಕಾರ್ಯದ ಸ್ಥಪತಿ ಸಿದ್ಧಲಿಂಗಸ್ವಾಮಿಗಳಾಗಿದ್ದರೆ ಇವರ ಕೈಕೆಳಗೆ ಎಲ್ಲಾ ಕೆಲಸ ಕಾರ್ಯಗಳ ಮೇಲ್ವಿಚಾರಕರಾಗಿ ಇವರ ಪುತ್ರ ಹಾಗೂ ಶಿಷ್ಯರಾದ ನಾಗೇಂದ್ರ ಸ್ಥಪತಿಗಳಿದ್ದು, ಸಿದ್ಧಲಿಂಗಸ್ವಾಮಿಗಳ ಶಿಷ್ಯಂದಿರಾದ ಸಿ.ಪರಮೇಶ್ವರಾಚಾರ್, ವಿಷಕಂಠಾಚಾರ್, ಶಂಕರಾಚಾರ್, ಚೆನ್ನವೀರಯ್ಯ ಬಸವಣ್ಣ ಮುಂತಾದವರು ಈ ದೇವಸ್ಥಾನದ ನಿರ್ಮಾಣದಲ್ಲಿ ರಾತ್ರಿ ಹಗಲೆನ್ನದೆ ದುಡಿದಿದ್ದರೆಂದು ತಿಳಿದುಬರುತ್ತದೆ. ಇಲ್ಲಿ ದುಡಿದ ಎಲ್ಲರ ಆಶಯ ಒಂದೇ ಆಗಿತ್ತು. ಈ ದೇವಸ್ಥಾನವು ಕೇವಲ ಒಂದು ಪೂಜಾಮಂದಿರವಾಗಿರದೆ, ಇದೊಂದು ಶಿಲ್ಪಕಲಾ ಸಮುಚ್ಚಯ ವಾಗಿರುವುದರೊಂದಿಗೆ, ಇದು ಸೂರ್ಯ ಚಂದ್ರರಿರುವವರೆಗೆ ಶಾಶ್ವತವಾಗಿರಬೇಕೆಂಬುದೇ ಇವರೆಲ್ಲರ ಇಚ್ಛೆಯಾಗಿತ್ತು. ಈ ದೇವಸ್ಥಾನವನ್ನು ನೋಡಿದ ಯಾರಿಗಾದರೂ ಈ ದಿಸೆಯಲ್ಲಿ ದುಡಿದ ಶಿಲ್ಪಿಗಳ ಕಠಿಣ ಪರಿಶ್ರಮ, ಕೆಲಸದಲ್ಲಿನ ನಿಷ್ಠೆ, ತ್ಯಾಗ ಮನೋಭಾವ ಅರಿವಾಗದಿರದು.

ಮೈಸೂರಿನ ರಾಮಾನುಜ ರಸ್ತೆಯಲ್ಲಿ ಕಾಮಕಾಮೇಶ್ವರಿ ದೇವಾಲಯವು ನಿರ್ಮಾಣಗೊಂಡಿದ್ದು, ಇದರ ಪಕ್ಕದಲ್ಲಿ ನಾಗಲಿಂಗಸ್ವಾಮಿಗಳ ಮಠ ಹಾಗೂ ಎದುರಿಗೆ ಸ್ವಾಮಿಗಳ ಗುರುಕುಲವಿದೆ. ದೇವಸ್ಥಾನದ ಸುತ್ತ ಎತ್ತರವಾದ ಪಗಾರವಿದ್ದು ಮಹಾದ್ವಾರದ ಇಕ್ಕೆಲಗಳಲ್ಲಿ ಪುಟ್ಟ ಪುಟ್ಟ ಮಂಟಪಗಳನ್ನು ನಿರ್ಮಿಸಿ ಈ ಮಂಟಪಗಳಲ್ಲಿ ನಾಡದೇವತೆ ಚಾಮುಂಡೇಶ್ವರಿ, ಭೈರವಸ್ವಾಮಿ, ಈಶ್ವರ ಮುಂತಾದ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ದೇವಸ್ಥಾನದ ಮಹಾದ್ವಾರದ ಮೂಲಕ ಒಳಹೊಕ್ಕು ಎಡ ಬಲಕ್ಕಿರುವ ಜಗತಿಯನ್ನು ದಾಟಿದರೆ ಸಿಗುವುದೇ ಪ್ರದಕ್ಷಿಣಾಪಥ. ಇಲ್ಲಿ ಕಣ್ಣೆತ್ತಿ ನೋಡಿದರೆ ಮೊದಲಿಗೆ ಕಾಣುವುದೇ ವೃಷಭವಾಹನಮೂರ್ತಿ, ಚಂದ್ರಶೇಖರಮೂರ್ತಿ, ಮುಖ ಮಂಟಪ, ಇದರ ಮೇಲಿನ ಭಿತ್ತಿ ಶಿಲ್ಪಗಳು, ಬಾಗಿಲಿಗೆ ಹೊಂದಿಕೊಂಡಂತಿರುವ ದ್ವಾರಪಾಲಕರು. ಹೀಗೆ ದೇವಸ್ಥಾನದ ಬಲ ಬದಿಯಿಂದ ಪ್ರದಕ್ಷಿಣ ಪಥದಲ್ಲಿ ಮುಂದುವರಿದಂತೆ ಉಮಾಮಹೇಶ್ವರ ಮೂರ್ತಿ, ಮರ್ಕಾಂಡೇಯ ಮೂರ್ತಿ,

ವಿಘ್ನೇಶ್ವರ ವರಪ್ರಸಾದ ಮೂರ್ತಿ, ಕಾಮಸಂಹಾರ ಮೂರ್ತಿ, ಅರ್ಧನಾರೀಶ್ವರ ಮೂರ್ತಿ, ಭಿಕ್ಷಾಟನಾ ಮೂರ್ತಿ, ದೇವಸ್ಥಾನದ ಹಿಂದೆ ಏಕಪಾದ ಮೂರ್ತಿ, ಮಹಾಲಿಂಗೋದ್ಭವ ಮೂರ್ತಿ, ಚಂಡಿಕೇಶ್ವರ ಮೂರ್ತಿ, ಹರಿಹರೇಶ್ವರ ಮೂರ್ತಿ, ಚಕ್ರದಾನ ಮೂರ್ತಿ, ಸೊಮಸ್ಕಂದ ಮೂರ್ತಿ, ಗಜಾಸುರಮರ್ಧನ ಮೂರ್ತಿ, ಶಿವಜಲಂಧರ ಮೂರ್ತಿ, ವಿಷಪಾನಮೂರ್ತಿಗಳು ಕಂಡುಬರುತ್ತವೆ. ಇಲ್ಲಿ ಮುಖಮಂಟಪದ ಎಡ ದ್ವಾರವಿದ್ದು ಇಲ್ಲಿ ಇಕ್ಕೆಲಗಳಲ್ಲಿ ದ್ವಾರಪಾಲಕರಿದ್ದು ಇದರನಂತರ ಕಾಣವುದೇ ಕಲ್ಯಾಣ ಸುಂದರ ಮೂರ್ತಿ. ದೇವಸ್ಥಾನದ ಮುಖಮಂಟಪದಲ್ಲಿ ಸುಮಾರು ಐದು ಅಡಿ ಎತ್ತರ, ಎಂಟು ಅಡಿ ಉದ್ದವಿರುವ ಒಂದು ಸುಂದರವಾದ ನಂದಿಯ ವಿಗ್ರಹವನ್ನು ಇಲ್ಲಿ ಕಾಣಬಹುದು. ಈ ವಿಗ್ರಹದ ಪೀಠದಲ್ಲಿ ಈ ಶಿಲ್ಪವು ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳ ಪುತ್ರ ನಾಗೇಂದ್ರ ಸ್ಥಪತಿಗಳು ರಚಿಸಿರುವುದು ಎಂದು ಉಲ್ಲೇಖಿಸಿರುವುದು ಗಮನಾರ್ಹ.

ಈ ದೇವಸ್ಥಾನವು ಕಗ್ಗಲ್ಲಿನಿಂದ ನಿರ್ಮಾಣಗೊಂಡಿದ್ದು ಹೊಯ್ಸಳ ಶೈಲಿಯಲ್ಲಿ ರಚಿಸಲಾಗಿದೆ. ದೇವಸ್ಥಾನದ ತಳದ ಸುತ್ತಲೂ ಪಟ್ಟಿಕೆಯಿದ್ದು ಈ ಪಟ್ಟಿಕೆಗಳು ಹೂಬಳ್ಳಿ ಹಂಸಗಳಿಂದ ಅಲಂಕೃತಗೊಂಡಿದೆ. ಪ್ರತಿ ಮೂಲೆಯ ತಿರುವು ಪ್ಯಾಘ್ರಾಳಿ ಮತ್ತು ಮಕರ ವ್ಯಾಳಿಗಳಿಂದ ಕೂಡಿದೆ. ದೇವಸ್ಥಾನದ ಸುತ್ತ ಗೋಡೆಗಳಲ್ಲಿ ಗೂಡುಗಳನ್ನು ನಿರ್ಮಿಸಿ ಈ ಗೂಡುಗಳಲ್ಲಿ ಶಿವಲೀಲೆಗೆ ಸಂಬಂಧಿಸಿದ ಹತ್ತೊಂಬತ್ತು ಮೂರ್ತಿಗಳನ್ನು ಸ್ಥಾಪಿಸಲಾಗಿದೆ. ಈ ಗೂಡಿನ ಸುತ್ತಲೂ ಸುಂದರ ಕುಸುರಿ ಕೆಲಸವುಳ್ಳ ಮಂಟಪಗಳನ್ನು ರಚಿಸಲಾಗಿದೆ. ಗರ್ಭಗುಡಿಯ ವಿಮಾನವು ಸುಮಾರು ಹದಿನೈದು ಅಡಿಗಳಷ್ಟು ಎತ್ತರವಿದ್ದು ಇವು ಐದು ಹಂತಗಳನ್ನು ಹೊಂದಿದೆ. ಪ್ರತೀ ಹಂತದಲ್ಲಿಯೂ ವಿಗ್ರಹಗಳಿದ್ದು ಎರಡನೇ ಹಂತದ ನಾಲ್ಕು ಮೂಲೆಗಳಲ್ಲೂ ನಂದಿ ವಿಗ್ರಹಗಳಿವೆ. ನಾಲ್ಕನೇ ಹಂತದಲ್ಲಿ ಗರುಡ ಕೈಮುಗಿದು ಕುಳಿತ ವಿಗ್ರಹವಿದೆ. ಇವುಗಳು ಮಾತ್ರವಲ್ಲದೆ ವಿಮಾನದ ಸುತ್ತಲೂ ಹಲವಾರು ವಿಗ್ರಹಗಳಿವೆ. ಇವುಗಳನ್ನು ದಾಟಿ ಒಳಗೆ ಪ್ರವೇಶಿಸಿದರೆ ಸುಂದರವಾದ ಗರ್ಭಗೃಹದ ಮುಖ ಮಂಟಪ, ಒಂದು ಕ್ಷಣ ನಮ್ಮನ್ನು ತನ್ಮಯರನ್ನಾಗಿಸಿ ನಾವೆಲ್ಲೋ ಹೊಯ್ಸಳ ವಾಸ್ತು ಶೈಲಿಯ ಪುರಾತನ ದೇವಾಲಯ ದೊಳಗಿದ್ದೇವೇನೋ ಎಂಬ ಭ್ರಮೆಯನ್ನು ಹುಟ್ಟಿಸುತ್ತದೆ.

ಇಲ್ಲಿರುವ ಕಂಬಗಳು ಯಾಂತ್ರಿಕ ತಿರುಗಣೆಯ ಸಹಾಯದಿಂದ ರಚಿಸಿದಂತಿದ್ದು ಕಂಬದ ಕೆಳಗಿನ ಮತ್ತು ಮೇಲಿನ ಭಾಗ ಚೌಕಾಕಾರವಾಗಿದೆ. ಕಂಬದ ಕೆಳಗಿನ ನಾಲ್ಕೂ ಕಡೆಗಳಲ್ಲಿರುವ ಈ ಚೌಕಾಕೃತಿಯ ಸುತ್ತ ಕುಸುರಿ ಕೆತ್ತನೆಗಳಿಂದ ಅಲಂಕಾರಿಕ ವಿನ್ಯಾಸಗಳನ್ನು ರಚಿಸಿದ್ದರೆ, ಇವುಗಳ ಮಧ್ಯೆ ಪರಿವಾರ ದೇವತೆಗಳನ್ನು ರಚಿಸಲಾಗಿದೆ. ಕಂಬಗಳನ್ನು ಮೇಲಕ್ಕೆ ನೋಡುತ್ತಾ ಹೋದಂತೆ ಸುಂದರವಾದ ನುಣುಪಾದ ವೃತ್ತಾಕಾರದ ವಿವಿಧ ವಿನ್ಯಾಸಗಳನ್ನು ಹೊಂದಿದ್ದ ಕಂಬವು ಮೇಲ್ಭಾವಣಿಗೆ ಹೊಂದಿಕೊಂಡಂತಿರುವ ಜಾಗದಲ್ಲಿ ನರ್ತನ ಸುಂದರಿ, ಶುಕಭಾಷಿಣಿ, ವಿಲಾಸಿನಿ, ಮನೋನ್ಮಣಿಗಳ ಸುಂದರ ಶಿಲ್ಪಗಳನ್ನು ಕಡೆಯಲಾಗಿದೆ. ಇದರ ಮೇಲಿನ ಭಾಗದಲ್ಲಿ ಮೇಷಾದಿರಾಶಿಗಳು, ಅಷ್ಟದಿಕ್ಪಾಲಕರು ಮತ್ತು ನವಗ್ರಹಗಳ ಸುಂದರವಾದ ಅತೀ ನಾಜೂಕಿನ ಚಿತ್ರಶಿಲ್ಪಗಳನ್ನು ಕಾಣಬಹುದು. ಇಲ್ಲಿ ರಚಿಸಿರುವ ಭಿತ್ತಿಶಿಲ್ಪಗಳು ಶಾಸ್ತ್ರೋಕ್ತವಾಗಿ

ರಚಿಸಲ್ಪಟ್ಟವೆಯೆಂದು ಅಲ್ಲಿನ ಅರ್ಚಕರು ಹೇಳುತ್ತಾರೆ. ಮಧ್ಯದಲ್ಲಿ ಸೂರ್ಯ, ಪೂರ್ವಕ್ಕೆ ಶುಕ್ರ, ಆಗ್ನೇಯಕ್ಕೆ ಚಂದ್ರ, ದಕ್ಷಿಣಕ್ಕೆ ಕುಜ, ಈಶಾನ್ಯಕ್ಕೆ ಬುಧ, ಉತ್ತರಕ್ಕೆ ಗುರು, ಪಶ್ಚಿಮಕ್ಕೆ ತುಲಾ, ವೃಶ್ಚಿಕ, ಧನಸ್ಸು, ಉತ್ತರಕ್ಕೆ ಮಕರ, ಕುಂಭ, ಮೀನ ಮುಂತಾದ ರಾಶಿ ಸಂಬಂಧಿ ವಿಗ್ರಹಗಳನ್ನು ರಚಿಸಿದ್ದರೆ ನಂತರದಲ್ಲಿ ಪೂರ್ವಕ್ಕೆ ಇಂದ್ರ, ಆಗ್ನೇಯಕ್ಕೆ ಅಗ್ನಿ, ದಕ್ಷಿಣಕ್ಕೆ ಯಮ, ನೈರುತ್ಯಕ್ಕೆ ನಿರುತಿ, ಪಶ್ಚಿಮಕ್ಕೆ ವರುಣ, ವಾಯುವ್ಯಕ್ಕೆ ವಾಯು, ಉತ್ತರಕ್ಕೆ ಕುಬೇರ, ಈಶಾನ್ಯಕ್ಕೆ ಈಶಾನ್ಯ ಮುಂತಾದ ಅಷ್ಟದಿಕ್ಪಾಲಕರನ್ನು ರಚಿಸಲಾಗಿದೆ.

ಈ ಮುಖಮಂಟಪದ ಸುತ್ತಲ ಗೋಡೆಗಳಲ್ಲಿ ಎಂಟು ಮಂಟಪಗಳನ್ನು ರಚಿಸಿದ್ದು ಈ ಮಂಟಪಗಳು, ಮಖರವ್ಯಾಳಿ ಹೂಬಳ್ಳಿಗಳಿಂದ ಅಲಂಕೃತಗೊಂಡಿದ್ದು ಅತೀ ನಾಜೂಕಿನ ಕುಸುರಿ ಕೆಲಸಗಳಿಂದ ರಚಿತವಾಗಿದೆ. ಈ ಮಂಟಪಗಳೊಳಗೆ ಸೂರ್ಯನಾರಾಯಣ, ಸುಬ್ರಹ್ಮಣ್ಯ, ಮಹೇಶ್ವರ, ಮಹಾಗಣಪತಿ, ಮಹಾವಿಷ್ಣು, ದಕ್ಷಿಣಾಮೂರ್ತಿ, ಭೈರವ, ವೀರಭದ್ರನ ಮೂರ್ತಿಗಳನ್ನು ಸ್ಥಾಪಿಸಲಾಗಿದೆ. ಈ ಶಿಲ್ಪಗಳನ್ನು ತುಂಬಾ ಆಕರ್ಷಕವಾಗಿ ಕೆತ್ತಲಾಗಿದೆ. ಗರ್ಭಗ್ರಹದ ಬಲಕ್ಕಿರುವ ಮಂಟಪದಲ್ಲಿ ಸ್ಥಾಪಿಸಲ್ಪಟ್ಟಿರುವ ಮಹಾಗಣಪತಿಯ ವಿಗ್ರಹವಂತೂ ಅಲ್ಲಿರುವ ಶಿಲ್ಪ ಸಮೂಹಗಳಲ್ಲೇ ಅತ್ಯುತ್ತಮವಾದುದೆಂದು ಅದನ್ನು ನೋಡಿದ ಯಾರಿಗಾದರೂ ಅನಿಸದಿರದು. ಇಲ್ಲಿ ಗಣೇಶನು ಚತುರ್ಬಾಹುಗಳನ್ನು ಹೊಂದಿದ್ದು, ಬಲದ ಒಂದು ಕೈಯಲ್ಲಿ ಅಂಕುಶ ಇನ್ನೊಂದರಲ್ಲಿ ಮುರಿದ ದಂತವನ್ನು ಹಿಡಿದಿದ್ದರೆ, ಎಡದ ಒಂದು ಕೈಯಲ್ಲಿ ಪಾಶ ಇನ್ನೊಂದರಲ್ಲಿ ಮೋದಕವನ್ನು ಹಿಡಿದು, ಬಿರಿಯತ್ತಿರುವ ತನ್ನ ಹೊಟ್ಟೆಗೆ ಉರಗವನ್ನು ಸುತ್ತಿ, ಸರ್ವಾಭರಣ ಅಲಂಕೃತನಾಗಿ ಕುಳಿತಿರುವ ಗಣೇಶನು ಶಿಲ್ಪಿಗಳ ಒಂದು ಅದ್ಭುತ ಸೃಷ್ಟಿಯೇ ಸರಿ. ಗಣೇಶನ ಬಾಹುಗಳ ರಚನೆ, ಹಸ್ತಗಳಲ್ಲಿನ ಬೆರಳುಗಳ ಲಾಲಿತ್ಯಪೂರ್ಣ ವಿನ್ಯಾಸ, ತನ್ನ ಸೊಂಡಿಲಿನಿಂದ ಬಳಸಿ ಹಿಡಿದಿರುವ ಮಿಡಿಮಾವಿನಹಣ್ಣಿನ ರಚನಾ ಕೌಶಲ್ಯ, ಗಣೇಶನ ದೇಹ, ತೋಳುಗಳನ್ನು ಶೃಂಗರಿಸಿರುವ ಆಭರಣಗಳಲ್ಲಿನ ನಾಜೂಕುಗಳನ್ನೆಲ್ಲಾ ನೋಡುವಾಗ, ಒಂದು ಸುಂದರವಾದ ಲಾಲಿತ್ಯಪೂರ್ಣವಾದ ರೇಖಾಚಿತ್ರವನ್ನು ನೋಡುತ್ತಿರುವ ಅನುಭವ ಯಾವೊಬ್ಬ ಕಲಾವಿದನಿಗೂ ಆಗದಿರಲಾರದು. ಈ ಗಣೇಶನ ಶಿಲ್ಪದ ಮೈವಳಿಕೆಯನ್ನು ಕಂಡ ಯಾರಿಗಾದರೂ ಇದನ್ನೊಮ್ಮೆ ಸ್ಪರ್ಶಿಸಿ ಆನಂದಿಸಬೇಕೆನ್ನುವ ತವಕವನ್ನು ತಡೆಹಿಡಿಯಲಾಗದು.

ಗರ್ಭಗ್ರಹದ ಒಳಗೆ ಶಿವಲಿಂಗವಿದ್ದು ಇದರ ಹಿಂದೆ ಕಾಮ ಮತ್ತು ಕಾಮೇಶ್ವರಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ಎರಡೂ ವಿಗ್ರಹಗಳ ಹಸ್ತಗಳು ಕಬ್ಬಿನ ಜಲ್ಲೆಯಿಂದ ರಚಿಸಿದ ಬಿಲ್ಲು, ಹೂವಿನ ಮೊನಚನ್ನು ಹೊಂದಿದ ಅಂಬು, ಪಾಶಾಂಕುಶಗಳನ್ನು ಹೊಂದಿದ್ದು, ಶಿರದಲ್ಲಿ ಚಂದ್ರನಿದ್ದಾನೆ, ಕಾಮ ಮತ್ತು ಕಾಮೇಶ್ವರಿಯರು ಪೀಠಾರೂಢರಾಗಿದ್ದು, ಪೀಠ ಭಾಗದಲ್ಲಿ ಪರಮೇಶ್ವರನು ಪವಡಿಸಿರುವಂತೆ ಮತ್ತು ಪೀಠದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರನ ಕೆತ್ತನೆಗಳನ್ನು ರಚಿಸಲಾಗಿದೆ. ಇವುಗಳ ಸುತ್ತಲಿನ ಪ್ರಭಾವಳಿಯಲ್ಲಿ ಪಂಚಾದಶ ಮೂಲಾಕ್ಷರಗಳನ್ನು ಕೆತ್ತಲಾಗಿದೆ. ಈ ಶಿಲ್ಪದ ಒಟ್ಟು ಸೌಂದರ್ಯವನ್ನು ಆಸ್ವಾದಿಸಲು ಶಿಲ್ಪದ ಎದುರಿಗೆ ಶಿವಲಿಂಗ ಸ್ಥಾಪನೆಯಾಗಿರುವುದರಿಂದಲೂ ಮತ್ತು ಕಾಮಕಾಮೇಶ್ವರರ ವಿಗ್ರಹವು ಸದಾ ಪಟ್ಟೆಪೀತಾಂಬರ

ಗಳಿಂದ ಅಲಂಕೃತಗೊಂಡಿರುವುದರಿಂದಲೂ ಸ್ವಲ್ಪ ಅಡಚಣೆಯಾಗುವುದು ಸಹಜವಾದರೂ ಇದು ಅನಿವಾರ್ಯ ಕೂಡಾ.

ಈ ಮುಖಮಂಟಪದ ಹೊರಗೆ ಪ್ರದಕ್ಷಿಣ ಪಥದಲ್ಲಿ ಗರ್ಭಗ್ರಹಕ್ಕೆ ಎದುರಾಗಿ ಧ್ವಜಸ್ತಂಭವಿದೆ. ಇವರ ಕೆಳಗಿನ ಭಾಗದಲ್ಲಿ ಗಣಪತಿ, ಕೈಮುಗಿದು ನಿಂತಿರುವ ಶಿಲ್ಪ ಮತ್ತು ತ್ರಿಶೂಲ, ಢಮರುಗಳ ಉಬ್ಬು ಶಿಲ್ಪಗಳನ್ನು ಕಾಣಬಹುದು, ಈ ಶಿಲ್ಪ ಸಮುಚ್ಚಯವನ್ನು ನೋಡಿದಾಗ ಈ ಕಾರ್ಯಕ್ಕೆ ಆಗಿನ ಮಹಾರಾಜರು ನೀಡಿದ ಪ್ರೋತ್ಸಾಹದಿಂದ ಮಾತ್ರ ಇಂತಹಾ ಒಂದು ಮಹಾತ್ಸಾಧನೆಯನ್ನು ಶಿಲ್ಪಿ ಸಿದ್ಧಲಿಂಗಸ್ವಾಮಿಗಳು ಮಾಡಲು ಸಾಧ್ಯವಾಯಿತೆಂದರೆ ತಪ್ಪಾಗಲಾರದು. ಅಲ್ಲದೆ ಇವುಗಳನ್ನು ಒಟ್ಟಾರೆಯಾಗಿ ಗಮನಿಸಿದಾಗ ಸಿದ್ಧಲಿಂಗಸ್ವಾಮಿಗಳಿಗೆ, ವಾಸ್ತುಶಾಸ್ತ್ರದ ಬಗ್ಗೆ ಶಿಲ್ಪಶಾಸ್ತ್ರದ ಬಗ್ಗೆ ಶಿಲೆಗಳ ಬಗ್ಗೆ ಒಟ್ಟಾರೆಯಾಗಿ ಒಂದು ದೇವಸ್ಥಾನದ ನಿರ್ಮಾಣದ ಬಗ್ಗೆ ಇರುವ ಜ್ಞಾನದ ಬಗ್ಗೆ ಅರಿವಾಗುತ್ತದೆ. ಇದರ ಜೊತೆ ಇವರ ಶಿಷ್ಯವೃಂದದ ಗುರುಗಳ ಮೇಲಿನ ಭಕ್ತಿ, ವಿಶ್ವಾಸ ಇವರೆಲ್ಲರ ಪರಿಶ್ರಮದಿಂದ ಮಾತ್ರ ಇಂತಹಾ ಒಂದು ಅದ್ಭುತಕಾರ್ಯವನ್ನು ಮಾಡಲು ಸಾಧ್ಯವೆಂದೆನಿಸುತ್ತದೆ.

ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ತಮ್ಮ ಕಲಾಕೌಶಲ್ಯವನ್ನು ಮೈಸೂರು ಮತ್ತು ಮೈಸೂರು ಮಹಾರಾಜರಿಗೆ ಮಾತ್ರ ಸೀಮಿತಗೊಳಿಸದೆ, ರಾಜ್ಯದ ಮತ್ತು ದೇಶದ ಹಲವೆಡೆಗಳಿಗೆ ಶಿಲ್ಪಕಲಾಕೃತಿಗಳನ್ನು ರಚಿಸಿಕೊಟ್ಟಿರುತ್ತಾರೆಂದು ತಿಳಿದುಬರುತ್ತದೆ. ನಂಜನಗೂಡಿನಲ್ಲಿರುವ ಶ್ರೀಕಂಠೇಶ್ವರ ದೇವಾಲಯದಲ್ಲಿರುವ ನವಗ್ರಹ ದೇವತೆಗಳು, ಜೋಗಿನ ಜಲಪಾತದಲ್ಲಿ ಎರಡೂ ಕಡೆಗಳಲ್ಲಿ ಕಡೆದಿರುವ ಚಾಮುಂಡೇಶ್ವರಿ ವಿಗ್ರಹ, ದಾವಣಗೆರೆಗೆ ಶ್ರೀರಾಮ, ಲಕ್ಷ್ಮಣ, ಸೀತ, ಆಂಜನೇಯ, ಚಿಕ್ಕಮಗಳೂರಿಗೆ ವಿಘ್ನೇಶ್ವರ, ಪಟ್ಟನಾಯಕನ ಹಳ್ಳಿಗೆ ಅಂಬಿಕಾ, ಹಾಸನದ ಆನೆಕೆರೆ ಗ್ರಾಮಕ್ಕೆ ಚೆನ್ನಕೇಶವ, ಲಕ್ಷ್ಮೀ ವಿಗ್ರಹ, ಶೃಂಗೇರಿ ಮಠಕ್ಕೆ ಪಂಚಲೋಹದ ಶಾರದೆ, ಶಿಕಾರಿಪುರಕ್ಕೆ ಗಂಡಭೇರುಂಡ, ಹಿಂದೂಪುರದ ವೈಶ್ಯಮಂಡಳಿಗೆ ಮಾಡಿಕೊಟ್ಟ ಅಮೃತ ಶಿಲೆಯ ಕನ್ನಿಕಾ ಪರಮೇಶ್ವರಿ ಮತ್ತು ಶೇಷಶಯನ ವಿಗ್ರಹ, ಮಂಗಳೂರಿನ ವಿಶ್ವಕರ್ಮ ಜನಾಂಗದವರ ಬೇಡಿಕೆಯಂತೆ ಅಲ್ಲಿನ ಕಾಳಿಕಾಂಬ ದೇವಾಲಯಕ್ಕೆ ಭೇಟಿಕೊಟ್ಟ ಸ್ವಾಮಿಗಳು ಆ ದೇವಾಲಯವನ್ನು ಶಿಲ್ಪಮಯ ಗೊಳಿಸಿದ್ದರಿಂದ ಸಂತುಷ್ಟಗೊಂಡ ಮಂಗಳೂರಿನ ಅಖಿಲ ವಿಶ್ವಬ್ರಾಹ್ಮಣ ಸಭೆಯಲ್ಲಿ ಸ್ವಾಮಿಗಳಿಗೆ ರತ್ನ ಖಚಿತ ಬಾಹು ಬಂಧವನ್ನೂ, ಸುವರ್ಣ ಕಂಠಾಭರಣವನ್ನೂ ಇತ್ತು ಭಿನ್ನವತ್ತಳೆಗಳೊಂದಿಗೆ ಗೌರವಿಸಿದರೆಂದು ಮಾತ್ರವಲ್ಲದೆ, ರಾಜ್ಯದ ನಾನಾ ಕಡೆಗಳಿಗೆ ಸಿದ್ಧಲಿಂಗಸ್ವಾಮಿಗಳು ವಿಗ್ರಹವನ್ನು ರಚಿಸಿಕೊಟ್ಟಿರುತ್ತಾರೆಂದು ದಾಖಲೆಗಳಿಂದ ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಮಾತ್ರವಲ್ಲದೆ ಇತರೇ ರಾಜ್ಯಗಳಿಗೂ ಸ್ವಾಮಿಗಳು ರಚಿಸಿಕೊಟ್ಟ ಶಿಲ್ಪಗಳ ಮಾಹಿತಿ ದಾಖಲೆಗಳಿಂದ ತಿಳಿದುಬರುತ್ತದೆ. ಇವುಗಳಲ್ಲಿ ಮುಖ್ಯವಾದವು ಆಂಧ್ರದ ಗುಂಟೂರು ಜಿಲ್ಲೆಯ ಚಿದಾಲ ಎಂಬಲ್ಲಿಗೆ ಕೃಷ್ಣ ಶಿಲೆಯ ಕಾಮಾಕ್ಷಿ ವಿಗ್ರಹ, ಕಂಚಿಗೆ ಅಮೃತ ಶಿಲೆಯ ಗಾಯತ್ರಿ ವಿಗ್ರಹಗಳನ್ನು ಮಾಡಿಕೊಟ್ಟರು. ವಿಗ್ರಹಗಳನ್ನು ಮಾಡುವುದರೊಂದಿಗೆ ಸ್ವಾಮಿಗಳು

ಈ ಕಾರ್ಯಕ್ಕೋಸ್ಕರ ಭಾರತದಾದ್ಯಂತ ಸಂಚರಿಸುತ್ತಿದ್ದರು. ಹೀಗೆ ಪ್ರವಾಸ ಕೈಗೊಂಡ ಸ್ವಾಮಿಗಳು ತಮಿಳು ನಾಡಿಗೆ ಪ್ರವಾಸ ಬೆಳೆಸಿ, ಗ್ರಾಮ ಸಾಲಾವಳೀ ಪದ್ಧತಿಯನ್ನು ಅನುಸರಿಸಿ ವಾಲಾಜಪೇಟೆಯೆಂಬ ನಗರವನ್ನು ಜೀರ್ಣೋದ್ಧಾರ ಮಾಡಿದರಂತೆ. ಇದರಿಂದ ಸಂತುಷ್ಟರಾದ ಅಲ್ಲಿನ ಪ್ರಮುಖರು ಸ್ವಾಮಿಗಳಿಗೆ ರತ್ನಖಚಿತ ಕಿರೀಟವನ್ನು, ಕರ್ಣಕುಂಡಲವನ್ನು, ಕಂಠಾಭರಣವನ್ನು ಭಿನ್ನವತ್ತಳೆಗಳೊಂದಿಗೆ ನೀಡಿ ಗೌರವಿಸಿದರೆಂದು ತಿಳಿದುಬರುತ್ತದೆ. ಇವುಗಳು ಮಾತ್ರವಲ್ಲದೆ ಇವರು ರಚಿಸಿದ ಕಾಷ್ಟ ವಿಗ್ರಹ ಶಂಕರಾಚಾರ್ಯ ಮೂರ್ತಿಯು ಜರ್ಮನಿಯ ಡಾ॥ ರೆಡಲ್ಫ್ ಆಟೋ ಅವರ ಸಂಗ್ರಹವನ್ನು ಸೇರಿ ಸ್ವಾಮಿಗಳ ವಿಗ್ರಹಗಳು ದೇಶದ ಹೊರಗೂ ಸ್ಥಾನ ಪಡೆಯುವಂತಾಯಿತೆಂದು ತಿಳಿದುಬರುತ್ತದೆ.

ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ಮಾತ್ರವಲ್ಲ, ಯಾವುದೇ ಸ್ಥಪತಿ, ಶಿಲ್ಪಿಗಳ ಬಗ್ಗೆ ಅವರ ಶಿಲ್ಪಗಳ ಬಗ್ಗೆ ಸಮೀಕ್ಷೆ, ಅಧ್ಯಯನ ಮಾಡುವಾಗ ಆ ಕಾಲದಲ್ಲಿ ಮತ್ತು ಕೆಲವು ಸಂದರ್ಭಗಳಲ್ಲಿ ಈಗಲೂ, ರೂಢಿಯಲ್ಲಿರುವ ಚಿತ್ರ, ವಾಸ್ತುಶಿಲ್ಪ, ಶಿಲ್ಪ ರಚನಾ ಕ್ರಿಯೆಯ ಮತ್ತು ಶಿಸ್ತಿನ ಬಗ್ಗೆ ತಿಳಿದುಕೊಳ್ಳುವುದು ಅವಶ್ಯಕ, ಹೆಚ್ಚಿನ ಶಿಲ್ಪಿಗಳು ವಿಶ್ವಕರ್ಮ ಜನಾಂಗದವರಾಗಿದ್ದು, ಇವರು ತಾವು ರಚಿಸಿದ ದೇವತಾ ಮೂರ್ತಿಗಳಲ್ಲಾಗಲೀ, ಇತರೇ ಶಿಲ್ಪಗಳಲ್ಲಾಗಲೀ ತಮ್ಮ ಹೆಸರುಗಳನ್ನು ಯಾವುದೇ ರೀತಿಯಲ್ಲಿ ದಾಖಲಿಸುವುದು ಅಪರಾಧವೆಂದು ನಂಬಿದ್ದರು. ಆದರೂ ಬಾದಾಮಿ ಚಾಲುಕ್ಯರ ಕಾಲದಿಂದ ವಿಶ್ವಕರ್ಮ, ದಾಮಕೀರ್ತಿ, ಚಪಡ, ಶ್ರೀ ಗುಂಡನ ಅನಿವಾರಿತಾಚಾರಿ, ಓವಜ, ನರಸೋಜ, ಮುಂತಾದ ಹೆಸರುಗಳು ಅಲ್ಲೊಂದು ಇಲ್ಲೊಂದು ಕಾಣಸಿಗುತ್ತವೆ. ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಕಲಾವಿದರು ತಮ್ಮ ಹೆಸರುಗಳನ್ನು ತಾವು ರಚಿಸಿದ ಶಿಲ್ಪಗಳಲ್ಲಿ ಕೊರೆದಿರುವುದನ್ನು ಕಾಣಬಹುದು. ಇದು ದಾಖಲಾತಿಯ ದೃಷ್ಟಿಯಿಂದ ಒಳ್ಳೆಯ ಬೆಳವಣಿಗೆ. ಕರ್ನಾಟಕದಲ್ಲಿ ಸಾಂಪ್ರದಾಯಿಕ ಶಿಲ್ಪಗಳ ಒಂದು ದೊಡ್ಡ ಪರಂಪರೆಯೇ ಬೆಳೆದುಬಂದಿದೆ. 1996ರಲ್ಲಿ ಪಿ.ಆರ್.ತಿಪ್ಪೇಸ್ವಾಮಿಯವರು ಬರೆದು, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಪ್ರಕಟಿಸಿದ ಪುಸ್ತಕ ಶಿಲ್ಪಿ ಸಂಕುಲದಲ್ಲಿ ಸುಮಾರು ಇಪ್ಪತ್ತೆಂಟು ಶಿಲ್ಪಿಗಳನ್ನು ಗುರುತಿಸಿದ್ದಾರೆ. ಇನ್ನೂ ಹಲವರ ಹೆಸರುಗಳನ್ನು ಬಿಟ್ಟಿರುತ್ತಾರೆಂದು ಕೆಲವು ಶಿಲ್ಪಿಗಳು ನೊಂದು ಹೇಳುತ್ತಾರೆ. ತಿಪ್ಪೇಸ್ವಾಮಿಯವರು ಹೆಸರಿಸಿದ ಹೆಚ್ಚಿನವರನ್ನು ಶಿಲ್ಪಿಗಳೆಂದು ಗುರುತಿಸಿದ್ದು ಕೆಲವರನ್ನು ಮಾತ್ರ ಸ್ಥಪತಿಗಳೆಂದು ಗುರುತಿಸಿರುತ್ತಾರೆ.

ಸ್ಥಪತಿಯು ಕಲಾವಿದರ, ಶಿಷ್ಯರ ಒಂದು ಗುಂಪಿನ ಗುರಿಕಾರನಂತಿದ್ದು, ಇವನು ಕಲಾಕೃತಿಯ ರಚನೆಯ ಒಟ್ಟು ನಿರ್ವಾಹಕನಾಗಿರುತ್ತಾನೆ. ಪ್ರತೀ ಹಂತದಲ್ಲೂ ಸ್ಥಪತಿಯ ನಿರ್ದೇಶನದಂತೆಯೇ ಎಲ್ಲಾ ಕಾರ್ಯಗಳೂ ನಡೆಯುತ್ತವೆ. ಇವನೊಂದಿಗೆ ಹಿರಿಯ, ಜಾಣ ವಿದ್ಯಾರ್ಥಿ, ಶಿಷ್ಯ, ಮುಖ್ಯ ಸ್ಥಪತಿಗೆ ಸಹಾಯಕನಾಗಿ ಕಾರ್ಯನಿರ್ವಹಿಸುತ್ತಾನೆ. ಮುಖ್ಯ ಕಲಾವಿದ, ಸ್ಥಪತಿ, ದೊಡ್ಡ ಗಾತ್ರದ ಚಿತ್ರ, ಶಿಲ್ಪಗಳನ್ನು ರಚಿಸುವ ಸಂದರ್ಭದಲ್ಲಿ ಇವರ ಶಿಷ್ಯಂದಿರು ಇವರೊಂದಿಗೆ ಕೈ ಜೋಡಿಸಿರುತ್ತಾರೆ. ಇದು ದೇವಸ್ಥಾನಗಳ ನಿರ್ಮಾಣದ ಸಂದರ್ಭದಲ್ಲಿ ಮತ್ತು ಬೃಹತ್ ಶಿಲ್ಪಾಕಲಾಕೃತಿಯ ರಚನೆಯ ಸಂದರ್ಭಗಳಲ್ಲಿ ಅತಿ ಸಾಮಾನ್ಯ ಪದ್ಧತಿಯಾಗಿದೆ. ಇಂತಹ ಸಂದರ್ಭಗಳಲ್ಲಿ ಒಬ್ಬ ಸ್ಥಪತಿ ನಿರ್ಮಿಸಿದ ದೇವಸ್ಥಾನ, ಅಲ್ಲಿರುವ ಶಿಲ್ಪಗಳು, ಇವುಗಳೆಲ್ಲ

ಹಲವು ಶಿಲ್ಪಿಗಳ ಪರಿಶ್ರಮದಿಂದ ಸ್ಥಪತಿಯ ಮಾರ್ಗದರ್ಶನದೊದಿಗೆ ರಚಿತವಾದವು. ಈ ಶಿಲ್ಪಿಗಳ ಕೂಟದಲ್ಲಿರುವ ಹೆಚ್ಚಿನ ಶಿಲ್ಪಿಗಳು ಸ್ಥಪತಿಯ ವಂಶಸ್ಥರು, ಶಿಷ್ಯಂದಿರಾಗಿರುತ್ತಾರೆ. ಇವರೆಲ್ಲರು ಸ್ಥಪತಿಯು ತಮ್ಮ ಗುರುಗಳೆಂದೂ, ನಾವು ಮಾಡುವ ಎಲ್ಲಾ ಕೆಲಸವು ಗುರುವಿಗೆ ಅರ್ಪಿತವೆಂದು ಭಕ್ತಿ, ಶ್ರದ್ಧೆಯಿಂದ ನಂಬಿ ನಡೆದುಕೊಂಡು ಬಂದವರು. ಆದುದರಿಂದ ಸ್ಥಪತಿಯ ಮೇಲ್ವಿಚಾರಣೆಯಲ್ಲಿ ನಿರ್ಮಿಸಲ್ಪಟ್ಟ ದೇವಸ್ಥಾನ, ರಚಿಸಲ್ಪಟ್ಟ ಶಿಲ್ಪಗಳೆಲ್ಲವೂ ಆ ಸ್ಥಪತಿ ನಿರ್ಮಿಸಿರುವುದೆಂದು ತಿಳಿಯಲಾಗುತ್ತದೆ. ಆದರೆ ಕೆಲವು ಸಂದರ್ಭಗಳಲ್ಲಿ ಇಂತಹ ಬಾಂಧವ್ಯ ಅರ್ಧದಲ್ಲಿ ಮುರಿದು ಗುರುಶಿಷ್ಯರು ಬೇರೆ ಬೇರೆಯಾದ ಹಲವು ಉದಾಹರಣೆಗಳು ದೊರೆಯುತ್ತವೆ.

ಇಂತಹ ಘಟನೆಗಳು ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳ ಜೊತೆಯಲ್ಲೂ ನಡೆದಿರುವುದು ತಿಳಿದುಬರುತ್ತದೆ. ಇಂತಹ ಸಂದರ್ಭಗಳಲ್ಲಿ ಸ್ಥಪತಿಗಳಿಂದ ನಿರ್ಮಿಸಲ್ಪಟ್ಟ ದೇವಸ್ಥಾನ ಮುಂತಾದ ಕಡೆಗಳಲ್ಲಿ ನಿರ್ಮಿಸಿದ ಶಿಲ್ಪಕೃತಿಗಳನ್ನು ಯಾರು ಕಡೆದರೆಂಬ ಚರ್ಚೆಗಳು ನಡೆಯುತ್ತವೆ. ಕೆಲವು ಕಡೆ ಶಿಲ್ಪಗಳಲ್ಲಿ ಹೆಸರುಗಳನ್ನು ಕಡೆದಿರುವುದು ಕಂಡು ಬಂದರೂ ಈ ಹೆಸರು ಆ ನಿರ್ದಿಷ್ಟ ಶಿಲ್ಪವನ್ನು ಕಡೆದ ಶಿಲ್ಪಿಯದ್ದೋ, ಸ್ಥಪತಿಯದ್ದೋ ಎಂಬ ಸಂಶಯಗಳೂ ಮೂಡಲು ಆಸ್ಪದವಿರುತ್ತವೆ. ಈ ಸಂಶಯಗಳೊಂದಿಗೆ ಸಿದ್ಧಲಿಂಗಸ್ವಾಮಿಗಳ ವಂಶಸ್ತರು, ಶಿಷ್ಯಂದಿರ ವಂಶಸ್ತರು ಹೇಳುವ ಮಾತುಗಳನ್ನು ಕೇಳಿದರೆ ದಿಗ್ಭ್ರಮೆಯಾಗುತ್ತದೆ. ನಿಜವಾಗಿ ಶಿಲ್ಪವನ್ನು ಕಡೆದ ಶಿಲ್ಪಿಗಳ ಬದಲಾಗಿ ಇನ್ನಾರದೋ ಹೆಸರನ್ನು ಅಲ್ಲಿ ಕೆತ್ತಲಾಗಿದೆ ಎನ್ನುವ ವರೆಗೆ ಇವರ ಮಾತುಗಳು ಮುಂದುವರಿಯುತ್ತವೆ. ಇವು ಕೇವಲ ಊಹಾಪೋಹಗಳಾಗಿರಲೂ ಬಹುದು. ಈ ವಿಷಯಗಳನ್ನು ವಿವರವಾಗಿ ಪರಾಂಭರಿಸಲು ಹೋಗುವುದರಿಂದ ಕೆಲವು ನಿಷ್ಠ ಶಿಲ್ಪಿಗಳ ಮನಃ ನೋಯಬಹುದೆಂಬ ದೃಷ್ಟಿಯಿಂದ ಈ ಬಗ್ಗೆ ಪ್ರಸ್ತಾಪಿಸುವುದು ಅವಶ್ಯವಿಲ್ಲವೆಂದು ತಿಳಿಯುತ್ತೇನೆ. ಶಿಲ್ಪ ಸಿದ್ದಾಂತಿ ಸಿದ್ಧಲಿಂಗಸ್ವಾಮಿಗಳ ಬಗ್ಗೆ ಬರೆದ ಕೆಲವು ಲೇಖನದಲ್ಲಿ ಕೆಲವು ಶಿಲ್ಪಗಳನ್ನು ಗುರುತಿಸಿ ಅವುಗಳು ಸಿದ್ಧಲಿಂಗಸ್ವಾಮಿಗಳು ಕಡೆದವುಗಳೆಂದು ಉಲ್ಲೇಖಿಸಿದ್ದರೆ, ಸಿದ್ಧಲಿಂಗಸ್ವಾಮಿಗಳ ಕೆಲವು ಶಿಷ್ಯರ, ವಂಶಸ್ತರ ಬಗ್ಗೆ ಬರೆದ ಲೇಖನಗಳಲ್ಲಿ ಆ ಶಿಲ್ಪಗಳು ಈ ಶಿಷ್ಯ ವಂಶಸ್ತರಿಂದ ರಚಿಸಿದವುಗಳೆಂದು ಉಲ್ಲೇಖಿಸಿರುವುದನ್ನೂ ಕಾಣಬಹುದು. ಸಿದ್ಧಲಿಂಗಸ್ವಾಮಿಗಳ ವಂಶಸ್ತರು ಮತ್ತು ಅವರ ಶಿಷ್ಯರ ವಂಶಸ್ತರನ್ನು ಈ ಬಗ್ಗೆ ಮೌಖಿಕವಾಗಿ ವಿಚಾರಿಸಿದಾಗಲೂ ಇದೇ ತರಹದ ವಿಭಿನ್ನ ಉತ್ತರಗಳು ದೊರೆತವು. ಕೆಲವು ಶಿಲ್ಪಗಳ ಬಗ್ಗೆ ವಿಚಾರಿಸಲಾಗಿ ಒಂದೇ ಶಿಲ್ಪವನ್ನು ಇಬ್ಬರು ಮೂವರು ಇದು ನನ್ನ ತಂದೆ ಮಾಡಿರುವುದೆಂದು ಬಹಳ ದೃಢವಾಗಿ ಹೇಳಿದ ಉದಾಹರಣೆಗಳೂ ಇವೆ. ಈ ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ವಾಸ್ತುಶಿಲ್ಪವನ್ನು, ಶಿಲ್ಪಗಳನ್ನು ನೋಡುವಾಗ, ಲೇಖಕನಾಗಿ ನನಗೆ, ಓದುಗರಾಗಿ ನಿಮಗೆ ಒಂದು ತರಹದ ಸಮಾನ ಮನೋಸ್ಥಿತಿ ಇರಲಿ ಎಂಬ ಉದ್ದೇಶದಿಂದ ಈ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸುವ ಅಗತ್ಯ ಕಂಡು ಬಂತು. ಇಲ್ಲಿ ಒಟ್ಟಾಗಿ ನಾವು ಗಮನಿಸಬೇಕಾದುದಿಷ್ಟೇ. ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ಈ ಶತಮಾನ ಕಂಡ ಒಬ್ಬ ಶ್ರೇಷ್ಠಮಟ್ಟದ ಸ್ಥಪತಿ ಮತ್ತು ಆಚಾರ್ಯ ಕೂಡಾ. ಆದುದರಿಂದಾಗಿಯೇ ಎಷ್ಟೋ ಸಂದರ್ಭಗಳಲ್ಲಿ ಗುರುಗಳು ಮಾಡಿದ ಕೃತಿಗೂ, ಶಿಷ್ಯ ತಯಾರಿಸಿದ ಕೃತಿಗೂ ಹೆಚ್ಚು ವ್ಯತ್ಯಾಸಗಳನ್ನು

ಕಾಣದೆ ಪ್ರತೀ ಶಿಷ್ಯನಲ್ಲೂ ಗುರುವನ್ನು ಕಾಣಬಹುದು. ಈ ದೃಷ್ಟಿಯಿಂದ ಕಾಮಕಾಮೇಶ್ವರಿ ದೇವಸ್ಥಾನ, ಭುವನೇಶ್ವರಿ ದೇವಸ್ಥಾನ, ಗಾಯತ್ರಿ ದೇವಸ್ಥಾನಗಳನ್ನು ನೋಡುವುದು ಸೂಕ್ತವೆಂದೆನಿಸುತ್ತದೆ.

ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳ ಶಿಲ್ಪಕಲಾರಚನೆಯನ್ನು ಗಮನಿಸಿದಾಗ ಇವರು ಹೊಯ್ಸಳ ಶೈಲಿಯಿಂದ ಪ್ರಭಾವಿತರಾಗಿದ್ದಾರೆಂಬುದರಲ್ಲಿ ಯಾವ ಸಂಶಯವೂ ಉಳಿಯಲಾರದು. ಇವರು ವಿದ್ವಾಂಸರಾಗಿದ್ದು, ಶಾಸ್ತ್ರಾಧ್ಯಯನ ಮಾಡಿದವರಾಗಿದ್ದು, ಶಿಲ್ಪಶಾಸ್ತ್ರದ ಆಳ, ವಿಸ್ತಾರವನ್ನು ಬಲ್ಲವರಾಗಿದ್ದುದರಿಂದಲೇ ಅವರು ರಚಿಸಿದ ದೇವ ದೇವತೆಯರ ಶಿಲ್ಪಗಳಾಗಲೀ ಚಿತ್ರಗಳಾಗಲೀ ಧ್ಯಾನ ಶ್ಲೋಕದ ಆಧಾರದಿಂದ ರಚಿಸಿದಂತಹವುಗಳಾಗಿವೆ. ಇವುಗಳೆಲ್ಲಾ ಶಾಸ್ತ್ರದ ಆಧಾರದಮೇಲೆಯೇ ರಚಿತಗೊಂಡು ಇವರಿಂದಲೇ ಪ್ರತಿಷ್ಠಾಪಿಸಲ್ಪಡುತ್ತಿದ್ದವು. ಇದು ಸ್ವಾಮಿಗಳ ವಿಶೇಷತೆಯಾಗಿದ್ದು ಇದರಿಂದಾಗಿಯೇ ಹಲವು ಕಡೆ ಬ್ರಾಹ್ಮಣರ ಕೆಂಗಣ್ಣಿಗೆ ತುತ್ತಾಗುವ ಪ್ರಸಂಗಗಳು ಎದುರಾದವು. ಸ್ವಾಮಿಗಳು ಮಠಾಧಿಪತಿಗಳಾಗಿ, ಆಚಾರ್ಯರಾಗಿ, ಚಿತ್ರಕಲಾವಿದರಾಗಿ, ಶಿಲ್ಪಿಗಳಾಗಿ, ವೇದ ಪುರಾಣ ಪಾರಂಗತರಾಗಿ, ಭಾಷಾ ತಜ್ಞರಾಗಿ, ಕನ್ನಡ ಪ್ರಿಯರಾಗಿ ಕನ್ನಡ ನಾಡಿಗೆ ಕೊಟ್ಟ ಕೊಡುಗೆ, ಮಾಡಿದ ಸೇವೆ ಅನನ್ಯ, ಅಮೋಘ. ತಾನೊಬ್ಬ ಪ್ರಬುದ್ಧ ಯೋಗ್ಯ ಸ್ಥಪತಿಯೆಂಬುದನ್ನು ಸಾಬೀತುಪಡಿಸಿ, ನಾಡಿಗೆ ತೋರಿಸಿಕೊಟ್ಟ ಈ ಶತಮಾನದ ಕೆಲವೇ ಕೆಲವು ಸ್ಥಪತಿಗಳಲ್ಲಿ ಇವರು ಅಗ್ರಗಣ್ಯರು. ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು ದೈವಾಧೀನರಾಗಿ ಸುಮಾರು ಐದು ದಶಕಗಳು ಕಳೆದರೂ ಅವರು ರಚಿಸಿದ ಕಲಾಕೃತಿಗಳು ನಮ್ಮ ನಿಮ್ಮೆಲ್ಲರ ಮಧ್ಯೆ ಸದಾ ಜೀವಂತವಾಗಿ ನಿಂತು, ಸೂರ್ಯಚಂದ್ರರಿರುವರೆಗೆ ನಮ್ಮ ನಾಡಿನ ಕಲೆ, ಸಂಸ್ಕೃತಿಯ ಬಗ್ಗೆ ಮುಂದಿನ ಜನಾಂಗಕ್ಕೆ ಸಾರುತ್ತಾ ಅಜರಾಮರವಾಗಿ ಉಳಿಯಲಿ ಮತ್ತು ಉಳಿಯುತ್ತದೆ ಎಂದು ಆಶಿಸೋಣ.

# ಆಧಾರ ಗ್ರಂಥಗಳು ಮತ್ತು ಲೇಖನಗಳು


1. ಬಿತ್ತಿಚಿತ್ರ ಪರಂಪರೆ. ಕರ್ನಾಟಕ ಲಲಿತಕಲಾ ಅಕಾಡೆಮಿ
   ಲೇಖಕ ಡಾ. ಅ.ಲ.ನರಸಿಂಹನ್

2. ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು
   ಸಂಪಾದಕರು : ಎನ್. ಮರಿಶಾಮಾಚಾರ್
   ಲೇಖಕರು : ಎಲ್. ಶಿವಲಿಂಗಪ್ಪ
   ಕೆ.ಸಿ.ಪುಟ್ಟಣ್ಣಾಚಾರ್
   ಎನ್. ಮರಿಶಾಮಾಚಾರ್

3. ಮಾನಸಾರ ಶಿಲ್ಪ ಪುಸ್ತಕದ ಚಿತ್ರಗಳು ಕರ್ನಾಟಕ ಲಲಿತಕಲಾ ಅಕಾಡೆಮಿ

4. ಸಾತ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ ಕರ್ನಾಟಕ ಲಲಿತಕಲಾ ಅಕಾಡೆಮಿ
   ಲೇಖಕರು : ಎಲ್. ಶಿವಲಿಂಗಪ್ಪ

5. ಅಲೇಕ್ಯ
   ಲೇಖಕರು : ಡಾ. ಅ.ಲ. ನರಸಿಂಹನ್ ಸಂಯೋಜಿತ

6. ಶಿಲ್ಪ ಸಂಕುಲ
   ಲೇಖಕರು: ಪಿ.ಆರ್.ತಿಪ್ಪೇಸ್ವಾಮಿ ಕರ್ನಾಟಕ ಲಲಿತಕಲಾ ಅಕಾಡೆಮಿ

7. ಸುಧಾ, ವಾರಪತ್ರಿಕೆ, 20 ಜನವರಿ 2000
   ಲೇಖನ: ನಾಡು ಮರೆತ ಮಹಾಶಿಲ್ಪಿ
   ಲೇಖಕರು: ಎಲ್.ಶಿವಲಿಂಗಪ್ಪ

8. ಚಿತ್ರಕಲಾ ಪ್ರಪಂಚ ಕರ್ನಾಟಕ ಲಲಿತಕಲಾ ಅಕಾಡೆಮಿ
   ಪ್ರಧಾನ ಸಂಪಾದಕರು : ಪಿ.ಆರ್.ತಿಪ್ಪೇಸ್ವಾಮಿ
   ಸಂಪಾದಕರು : ಡಾ। ಅ.ಲ.ನರಸಿಂಹನ್
   ಎನ್.ಮರಿಶಾಮಾಚಾರ್

9. ಕನ್ನಡ ವಿಷಯ ವಿಶ್ವಕೋಶ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

10. ಕಲಾವಾರ್ತೆ ಅಕ್ಟೋಬರ್-ಡಿಸೆಂಬರ್ ಕರ್ನಾಟಕ ಲಲಿತಕಲಾ ಅಕಾಡೆಮಿ
ಲೇಖನ: ದೇವತಾ ಚಿತ್ರ ರಚನೆಯಲ್ಲಿ ರವಿವರ್ಮ ಮತ್ತು ಸಿದ್ಧಲಿಂಗಸ್ವಾಮಿಗಳು
ಲೇಖಕರು: ಎಲ್. ಶಿವಲಿಂಗಪ್ಪ

11. ಋಗ್ವೇದ ಸಂಹಿತಾ ಭಾಗ 8

## ಪರಿವೀಕ್ಷಣೆಗೆ ಬಳಸಿದ ಮೂಲ ಕೃತಿಗಳು, ಪ್ರತಿ ಕೃತಿಗಳು, ಛಾಯಾಚಿತ್ರಗಳು

| | |
|---|---|
| 1. ಮಹಿಷಾಸುರ ಮರ್ದಿನಿ | ದರ್ಬಾರ್ ಹಾಲ್, ಮೈಸೂರು |
| 2. ಸರಸ್ವತಿ | ದರ್ಬಾರ್ ಹಾಲ್, ಮೈಸೂರು |
| 3. ಮಹಾಲಕ್ಷ್ಮಿ | ದರ್ಬಾರ್ ಹಾಲ್, ಮೈಸೂರು |
| 4. ಗಾಯತ್ರಿ | ದರ್ಬಾರ್ ಹಾಲ್, ಮೈಸೂರು |
| 5. ಭುವನೇಶ್ವರಿ | ದರ್ಬಾರ್ ಹಾಲ್, ಮೈಸೂರು |
| 6. ಕಾಳಿಕಾದೇವಿ | ದರ್ಬಾರ್ ಹಾಲ್, ಮೈಸೂರು |
| 7. ರಾಜರಾಜೇಶ್ವರಿ | ದರ್ಬಾರ್ ಹಾಲ್, ಮೈಸೂರು |
| 8. ಪಾರ್ವತಿ ಪರಮೇಶ್ವರ | ಶಿಲ್ಪಿ ಎನ್.ಶಿವಾನಂದ, ಮೈಸೂರು |
| 9. ಸೀತಾಂಜನೇಯ | ಶಿಲ್ಪಿ ಎನ್.ಶಿವಾನಂದ, ಮೈಸೂರು |
| 10. ಏಕಮುಖ ಪರಮೇಶ್ವರ | ಶಿಲ್ಪಿ ಎನ್.ಶಿವಾನಂದ, ಮೈಸೂರು |
| 11. ಭಿಕ್ಷಾಟನಾ ಮೂರ್ತಿ | ಶಿಲ್ಪಿ ಎನ್.ಶಿವಾನಂದ, ಮೈಸೂರು |
| 12. ತ್ರಿಮುಖ ಪರಮೇಶ್ವರ | ಶಿಲ್ಪಿ ಎನ್.ಶಿವಾನಂದ, ಮೈಸೂರು |
| 13. ಜಗದ್ಗುರು ಶಿಲ್ಪದರ್ಶನ ಮೂರ್ತಿ | ಶಿಲ್ಪಿ ಎನ್.ಶಿವಾನಂದ, ಮೈಸೂರು |

| | |
|---|---|
| 14. ಜಗದ್ಗುರು ನಾಗಲಿಂಗಸ್ವಾಮಿ | ಶಿಲ್ಪಿ ಎನ್.ಶಿವಾನಂದ, ಮೈಸೂರು |
| 15. ಜಗದ್ಗುರು ರೇಣುಕಾಚಾರ್ಯ ಲಿಂಗಾವತಾರ | ಕ್ಯಾಲೆಂಡರ್, ಮುದ್ರಿತ ಕೃತಿ |
| 16. ಪಂಚವಕ್ತ್ರೇಶ್ವರ | ಕ್ಯಾಲೆಂಡರ್, ಮುದ್ರಿತ ಕೃತಿ |
| 17. ಕೈಲಾಸ ಶಂಕರ | ಕ್ಯಾಲೆಂಡರ್, ಮುದ್ರಿತ ಕೃತಿ |
| 18. ಕೈಲಾಸ ಶಂಕರ (ಎರಡನೇ ಆವೃತಿ) | ಕ್ಯಾಲೆಂಡರ್, ಮುದ್ರಿತ ಕೃತಿ |
| 19. ಸರಸ್ವತಿ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 20. ಬ್ರಹ್ಮ, ಸರಸ್ವತಿ ಮತ್ತು ಸಾವಿತ್ರಿ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 21. ವಿಷ್ಣು, ಲಕ್ಷ್ಮಿ ಮತ್ತು ಭೂದೇವಿ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 22. ಶಿವ ಮತ್ತು ಪಾರ್ವತಿ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 23. ಸಾಯುಜ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 24. ಮಹಾಲಕ್ಷ್ಮಿ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 25. ಕಾಶ್ಯಪ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 26. ಜಿನ ಮತ್ತು ಅನುಯಾಯಿಗಳು | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 27. ಬುದ್ಧ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 28. ವಿದ್ಯಾಧರ | ಸಾಂದರ್ಭಿಕ ಚಿತ್ರ, ಮುದ್ರಿತ ಕೃತಿ |
| 29. ಮಹೇಶ್ವರಸ್ವಾಮಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 30. ಮಹಾವಿಷ್ಣುಸ್ವಾಮಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 31. ಭೈರವಸ್ವಾಮಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 32. ದ್ವಾರಪಾಲಕ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 33. ಗಣೇಶಸ್ವಾಮಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |

| | |
|---|---|
| 34. ಸುಬ್ರಹ್ಮಣ್ಯಸ್ವಾಮಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 35. ವೀರಭದ್ರಸ್ವಾಮಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 36. ಸೂರ್ಯನಾರಾಯಣಸ್ವಾಮಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 37. ಮಹಾಲಿಂಗೋದ್ಭವಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 38. ಏಕಪಾದಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 39. ಅರ್ಧನಾರೀಶ್ವರಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 40. ಮಾರ್ಕಾಂಡೇಯವರಪ್ರಸಾದಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 41. ಭಿಕ್ಷಾಟನಾಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 42. ಗಜಾಸುರಮರ್ಧನಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 43. ಹರಿಹರೇಶ್ವರಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 44. ವಿಷಪಾನಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 45. ತಾಂಡವಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 46. ಚಂದ್ರಶೇಖರಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 47. ವಿಘ್ನೇಶ್ವರವರಪ್ರಸಾದಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 48. ಚಂಡಿಕೇಶ್ವರಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 49. ವೃಷಭವಾಹನಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 50. ಉಮಾಮಹೇಶ್ವರ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 51. ಸೋಮಸ್ಕಂದಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 52. ಚಕ್ರದಾನಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 53. ಕಾಮಸಂಹಾರಮೂರ್ತಿ | ಕಾಮಕಾಮೇಶ್ವರಿ ದೇವಸ್ಥಾನ, ಮೈಸೂರು |
| 54. ದಕ್ಷಿಣಾಮೂರ್ತಿ | ಭುವನೇಶ್ವರಿ ದೇವಸ್ಥಾನ, ಮೈಸೂರು |

